# ಬಳ್ಳಾರಿ ಜಿಲ್ಲೆಯ ಕ್ರೈಸ್ತ ಮಿಷನರಿಗಳು
## ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಆರ್. ಲೋಹಿತ್ ಕುಮಾರ್

ಮಾರ್ಗದರ್ಶಕರು
ಡಾ. ಕೆ. ಮೋಹನ್‌ಕೃಷ್ಣ ರೈ
ಮುಖ್ಯಸ್ಥರು, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೬-೦೭



# ಬಳ್ಳಾರಿ ಜಿಲ್ಲೆಯ ಕ್ರೈಸ್ತ ಮಿಷನರಿಗಳು

## ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಆರ್. ಲೋಹಿತ್ ಕುಮಾರ್

ಮಾರ್ಗದರ್ಶಕರು
ಡಾ. ಕೆ. ಮೋಹನ್‌ಕೃಷ್ಣ ರೈ
ಮುಖ್ಯಸ್ಥರು, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ






ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೬-೦೭

512

## ಮಾರ್ಗದರ್ಶಕರ ಪ್ರಮಾಣಪತ್ರ

**ಬಳ್ಳಾರಿ ಜಿಲ್ಲೆಯ ಕ್ರೈಸ್ತ ಮಿಷನರಿಗಳು: ಚಾರಿತ್ರಿಕ ಅಧ್ಯಯನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಆರ್. ಲೋಹಿತ್ ಕುಮಾರ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಕೆ. ಮೋಹನ್‌ಕೃಷ್ಣ ರೈ**
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೮.೦೬.೦೭

# ಪ್ರಮಾಣ ಪತ್ರ

ಬಳ್ಳಾರಿ ಜಿಲ್ಲೆಯ ಕ್ರೈಸ್ತ ಮಿಷನರಿಗಳು: ಚಾರಿತ್ರಿಕ ಅಧ್ಯಯನ ಎಂಬ ನಿಬಂಧವನ್ನು ಡಾ. ಕೆ. ಮೋಹನ್‌ಕೃಷ್ಣ ರೈ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

R. Lohit Kumar

ಆರ್. ಲೋಹಿತ್ ಕುಮಾರ್
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 28-06-07

# ಪರಿವಿಡಿ

ಧರ್ಮಪ್ರಸಾರದಂತಹ ಮಹತ್ತರ ಉದ್ದೇಶದ ಈಡೇರಿಕೆಗಾಗಿ ಯುರೋಪಿನಲ್ಲಿ ಸ್ಥಾಪನೆಯಾದ ಮಿಷನ್ ಸೊಸೈಟಿಗಳು ಉತ್ಸಾಹಿ ತರುಣರಿಗೆ ಅನುಸರಿಸಬೇಕಾದ ಕಾರ್ಯಗಳ ಬಗ್ಗೆ ತರಬೇತಿಯನ್ನು ನೀಡಲಾರಂಭಿಸಿದವು. ಹೀಗೆ ತರಬೇತಿ ಪಡೆದು, ಯುರೋಪಿನಾದ್ಯಂತ ಧರ್ಮಪ್ರಸಾರ ಕಾರ್ಯ ಪೂರ್ಣಗೊಂಡ ನಂತರ ಭೂಅನ್ವೇಷಣೆಗಳಲ್ಲಿ ವಶಪಡಿಸಿಕೊಳ್ಳಲಾದ ಹೊಸ ಪ್ರದೇಶಗಳಿಗೆ ಮಿಷನರಿಗಳನ್ನು ಕಳುಹಿಸಿಕೊಡಲಾಯಿತು. ಹೀಗೆ ಪ್ರಪಂಚದ ನಾನಾ ಭಾಗಗಳಿಗೆ ಹರಡಿಕೊಂಡ ಮಿಷನರಿಗಳ ಇತಿಹಾಸವು ಅಮೋಘವಾದದ್ದು. ಈ ತರಬೇತಿಯನ್ನು ಪಡೆಯದೆ ಧರ್ಮಪ್ರಸಾರಕ್ಕಾಗಿ ಮಾತ್ರ ಬಂದ ಕ್ರೈಸ್ತರು ಅನೇಕರು. ಭಾರತದಲ್ಲಿ ಈ ರೀತಿಯ ಕ್ರೈಸ್ತರ ಆಗಮನವನ್ನು ಕ್ರಿ.ಶ. ೫೨ ರಿಂದ ಗುರುತಿಸಲಾಗುತ್ತಿದೆ. ಸಂತ ಥಾಮಸ್ ಅಪೋಸಲ್ಸ್‌ಗಳಲ್ಲಿ ಒಬ್ಬರಾಗಿದ್ದ ಇವರು ಭಾರತದ ದಕ್ಷಿಣ ಭಾಗದಲ್ಲಿ ಸುತ್ತಾಡಿದ್ದರ ಬಗ್ಗೆ ಅಸ್ಪಷ್ಟ ಆಧಾರಗಳು ದೊರೆತಿವೆ. ಇದು ಹೊರತು ಕ್ರಿ.ಶ. ಆರು, ಏಳನೆಯ ಶತಮಾನದಲ್ಲಿ, ಮಧ್ಯಕಾಲೀನ ಆರಂಭದ ದಶಕಗಳಲ್ಲಿ, ವಿಜಯನಗರ ಆಳ್ವಿಕೆಯ ಕಾಲದಲ್ಲಿ ಮತ್ತು ಇನ್ನುಳಿದಂತೆ ವಸಾಹತು ಅವಧಿಯಲ್ಲಿ ಕ್ರೈಸ್ತರ ಆಗಮನವು ಕ್ರಮವಾಗಿ ಹೆಚ್ಚುತ್ತಾ ಬಂದಿದೆ. ಇವರುಗಳ ಧರ್ಮಗುರುಗಳಾಗಿ ಬಂದ ಮಿಷನರಿಗಳ, ಮುಖ್ಯ ಉದ್ದೇಶ ಮತಾಂತರದ ಮೂಲಕ ಭಾರತದಾದ್ಯಂತ ಕ್ರೈಸ್ತ ಧರ್ಮವನ್ನು ಹರಡುವುದಾಗಿತ್ತು.

ಮಿಷನರಿಗಳ ಸೇವೆಗಳು ಮತ್ತು ಸಾಧನೆಗಳು ಅವಿಸ್ಮರಣೀಯವಾದವುಗಳು. ವಿಶ್ವಶಾಂತಿಯ ಆಕರಗಳಂತೆ ಕಂಡುಬರುವ ಮಿಷನರಿಗಳು ತಾವು ಸೇವೆ ಸಲ್ಲಿಸಿದ ಪ್ರತಿ ರಾಷ್ಟ್ರದಲ್ಲಿಯ ಸ್ಥಳೀಯರಲ್ಲಿ ವೈಚಾರಿಕತೆ ಮತ್ತು ವೈಜ್ಞಾನಿಕ ಪ್ರಜ್ಞೆಯನ್ನು ಮೂಡಿಸುವಲ್ಲಿ ಮಹತ್ವದ ಪಾತ್ರವಹಿಸಿದ್ದಾರೆ. ಆಗ್ನೇಯ ಏಷ್ಯಾ ರಾಷ್ಟ್ರಗಳಲ್ಲಿ ಪ್ರಮುಖವಾಗಿರುವ ಭಾರತ ದೇಶಕ್ಕೆ ಯುರೋಪಿಯನ್ನರು ವ್ಯಾಪಾರಕ್ಕಾಗಿ ಆಗಮಿಸುವ ವೇಳೆಗೆ ತಮ್ಮೊಟ್ಟಿಗೆ ಮಿಷನರಿಗಳನ್ನು ಕರೆತಂದರು. ಜಲಮಾರ್ಗವನ್ನು ಆಧರಿಸಿ ಬಂದ ಯುರೋಪಿಯನ್ ವ್ಯಾಪಾರಿಗಳೊಂದಿಗಿನ ಮಿಷನರಿಗಳು ಮೊದಲು ನೆಲೆ ನಿಂತದ್ದು ದಕ್ಷಿಣ-ಪಶ್ಚಿಮ ಭಾರತದಲ್ಲಿ. ನಂತರ ಪೂರ್ವ ಕರಾವಳಿಗೆ ವಿಸ್ತರಿಸಲ್ಪಟ್ಟರು. ಭಾರತದಾದ್ಯಂತ ಹರಡಿಕೊಂಡಿದ್ದ ಮಿಷನರಿಗಳ ಸಂಖ್ಯೆಯು ಒಂದು ಹಂತದಲ್ಲಿ ಪ್ರಪಂಚದ ಒಟ್ಟು ಮಿಷನರಿಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿದ್ದರು ಎಂಬುದು ಗಮನಾರ್ಹ. ನಾನಾ ಭಾಷೆಗಳ, ಸಂಸ್ಕೃತಿಗಳ ನೆಲೆವೀಡಾದ ಭಾರತದ ಮೇಲೆ ಮೀಷನರಿಗಳು ತಮ್ಮದೇ ಆದ ಪ್ರಭಾವವನ್ನು ಬೀರಿದ್ದಾರೆ. ಸುಮಾರು ಹತ್ತಕ್ಕೂ ಹೆಚ್ಚಿನ ಭಾಷೆ ಮತ್ತು ಲಿಪಿಗಳಿಗೆ ಹೊಸತನವನ್ನು ರೂಪಿಸಿಕೊಟ್ಟವರು ಮಿಷನರಿಗಳು. ಅಲ್ಲದೆ ಆ ಭಾಷೆಗಳ ಹಿನ್ನೆಲೆಯೊಂದಿಗೆ ಆಳ್ವಿಕೆ ನಡೆಸಿದ ಸಾಮ್ರಾಜ್ಯಗಳ ಇತಿಹಾಸವನ್ನು ಕಟ್ಟಿಕೊಟ್ಟವರಲ್ಲಿ ಅನೇಕರು ಮಿಷನರಿಗಳಾಗಿದ್ದಾರೆ. ಕನ್ನಡ ಭಾಷೆ ಮತ್ತು ಮುದ್ರಣಕ್ಕಾಗಿ ಲಿಪಿಯನ್ನು ರೂಪಿಸುವಲ್ಲಿ ಹಾಗೂ ಕರ್ನಾಟಕ ಇತಿಹಾಸ ರಚನೆಯಲ್ಲಿಯೂ ಮಿಷನರಿಗಳು ಬಹುಮುಖ್ಯ ಪಾತ್ರವಹಿಸಿದ್ದಾರೆ. ಈ ಎಲ್ಲಾ ಮಾಹಿತಿಯೊಟ್ಟಿಗೆ ಬಳ್ಳಾರಿಯ ಮಿಷನರಿಗಳ ಕೇಂದ್ರವು ಆರಂಭದಲ್ಲಿ ಯಶಸ್ವಿ ಕೇಂದ್ರವೆನ್ನಿಸಿಕೊಳ್ಳಲು ಆ ಪ್ರದೇಶವು ಮದ್ರಾಸ್ ಪ್ರಾಂತ್ಯದ ಈಸ್ಟ್ ಇಂಡಿಯಾ ಕಂಪೆನಿ ವ್ಯಾಪ್ತಿಗೆ ಒಳಪಟ್ಟಿದ್ದು ಬಹುಪಾಲು ಕಾರಣವೆನ್ನಬಹುದು. ಕ್ರಿ.ಶ. ೧೬೦೦ ರಲ್ಲಿ ಸ್ಥಾಪನೆಯಾದ ಈಸ್ಟ್ ಇಂಡಿಯಾ ಕಂಪನಿಯು ಕ್ರಿ.ಶ. ೧೬೩೯ರಲ್ಲಿ ಆರ್ಕಾಟ್ ಪ್ರಾಂತ್ಯದ

ಪಾಳೆಯಗಾರ ದಾಮರ್ಲ ವೆಂಕಟಾದ್ರಿ ನಾಯಕನಿಂದ ಪಡೆದ ಸಮುದ್ರ ತೀರದ ಸಣ್ಣ ಪ್ರದೇಶದಲ್ಲಿ ಕೋಟೆಯೊಂದನ್ನು ನಿರ್ಮಿಸಿಕೊಂಡರು. ಅದುವೇ ಸಂತ ಜಾರ್ಜ್ ಕೋಟೆ. ಇದು ಇಡೀ ಮದ್ರಾಸ್ ಪ್ರಾಂತ್ಯದ ಮೊದಲ ಮತ್ತು ಮುಖ್ಯ ಆಡಳಿತ ಕೇಂದ್ರವಾಯಿತು. ಪ್ರಾರಂಭದಲ್ಲಿ ವ್ಯಾಪಾರಕ್ಕೆ ಮಾತ್ರ ಸೀಮಿತವಾಗಿದ್ದ ಕಂಪೆನಿಯವರು ಕ್ರಮೇಣ ಭಾರತದ ರಾಜಕೀಯದಲ್ಲಿಯೂ ಆಸಕ್ತಿ ತಳೆದರು. ೧೭೫೭ ರ ಹೊತ್ತಿಗೆ ಇವರು ಸಾರ್ವಭೌಮರಾದರು. ಬ್ರಿಟಿಷರ ವಿರುದ್ಧವಾಗಿ ಬೆಳೆಯಲು ಯತ್ನಿಸುತ್ತಿದ್ದ ಮೈಸೂರಿನ ಮುಸ್ಲಿಂ ಆಳ್ವಿಕೆದಾರರಾದ ಹೈದರ್‌ಅಲಿ ಮತ್ತು ಪುತ್ರ ಟಿಪ್ಪು ಸುಲ್ತಾನರನ್ನು ೧೭೯೯ ರ ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಕೊನೆಗಾಣಿಸಿದ ನಂತರ ಬಳ್ಳಾರಿ ಒಳಗೊಂಡ ಮೈಸೂರು ರಾಜ್ಯದ ಉತ್ತರ ಭಾಗವು ಸಹಾಯಾರ್ಥವಾಗಿ ಹೈದರಾಬಾದ್ ನಿಜಾಮನ ತೆಕ್ಕೆಗೆ ಸೇರಿತು. ಹೈದರಾಬಾದ್‌ನ ನಿಜಾಮನು ಬ್ರಿಟಿಷರಿಗೆ ನೀಡಬೇಕಾಗಿದ್ದ ಈ ಮೊದಲಿನ ಸಹಾಯಕ ಸೈನ್ಯಪದ್ಧತಿ ನಿಯಮ ಪ್ರಕಾರದ ಬಾಕಿ ಹಣಕ್ಕೆ ಬದಲಿಯಾಗಿ ಬಳ್ಳಾರಿಯನ್ನೊಳಗೊಂಡ ತನ್ನ ದಕ್ಷಿಣ ಭಾಗವನ್ನು ಬ್ರಿಟಿಷರಿಗೆ ನೀಡಿದನು. ಹೀಗೆ ೧೮೦೦ ರಲ್ಲಿ ಬಳ್ಳಾರಿಯು ಬ್ರಿಟಿಷರ ಒಪ್ಪಿತ ಪ್ರದೇಶವಾಯಿತು. ನಂತರ ಬ್ರಿಟಿಷರು ಬಳ್ಳಾರಿಯನ್ನು ಮದ್ರಾಸ್ ಪ್ರಾಂತ್ಯದ ಉತ್ತರ ದಂಡು ಪ್ರದೇಶವಾಗಿ ಮಾರ್ಪಡಿಸಿಕೊಂಡರು. ಹೀಗೆ ಬ್ರಿಟಿಷರ ಸೈನ್ಯದಲ್ಲಿದ್ದ ಕ್ರೈಸ್ತರು ಬಳ್ಳಾರಿಗೆ ಬರುವಂತಾದರು. ಮತ್ತು ಇವರ ಧರ್ಮ ಸೇವೆಗಾಗಿ ಮಿಷನರಿಗಳು ಇವರುಗಳನ್ನು ಅನುಸರಿಸಿಕೊಂಡು ಬಳ್ಳಾರಿಗೆ ಬಂದರು. ಬಳ್ಳಾರಿ ವ್ಯಾಪ್ತಿಯಲ್ಲಿ ಹೀಗೆ ಮಿಷನರಿಗಳ ಪಾತ್ರ ಹೆಚ್ಚಿತು ಎನ್ನಬಹುದು. ಹತ್ತೊಂಬತ್ತನೆಯ ಶತಮಾನದಲ್ಲಿ ಮೊದಲ ದಶಕದಲ್ಲಿ ಆದ ಈ ಬೆಳವಣಿಗೆಯಲ್ಲಿ ಮೊದಲ ಪ್ರಾಟೆಸ್ಟೆಂಟ್ ಮಿಷನರಿ ಜಾನ್‌ಹ್ಯಾಂಡ್ಸರು ಕರ್ನಾಟಕದ ಪ್ರಥಮ ಪ್ರಾಟೆಸ್ಟೆಂಟ್ ಮಿಷನರಿಯಾಗಿ ಗುರುತಿಸಲ್ಪಟ್ಟಿದ್ದಾರೆ. ಇವರ ಸೇವೆಯಿಂದ ಆರಂಭವಾಗಿ ಕಾಲಾಂತರಗಳಲ್ಲಿ ಬಳ್ಳಾರಿಗೆ ಬಂದ ಮಿಷನರಿಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಅಲ್ಲದೆ ಬಳ್ಳಾರಿ ಜಿಲ್ಲೆಯ ಇತಿಹಾಸದಲ್ಲಿ ಮಿಷನರಿಗಳು ವಹಿಸಿದ ಪಾತ್ರವನ್ನು ವಿಮರ್ಶಾತ್ಮಕವಾಗಿ ನೋಡುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

**ಅಧ್ಯಯನದ ಉದ್ದೇಶ ಮತ್ತು ಸ್ವರೂಪ**

ಒಟ್ಟಾರೆ ಭಾರತದಲ್ಲಿನ ಆಧುನೀಕರಣ, ಕೈಗಾರಿಕೀಕರಣ, ಆಧುನಿಕ ಶಿಕ್ಷಣ ಇದೆಲ್ಲವನ್ನೊಳಗೊಂಡಂತೆ ಯುರೋಪಿನ ಪುನರುಜ್ಜೀವನದ ಅಂಶಗಳು ಬ್ರಿಟಿಷರ ಮೂಲಕವೇ ಭಾರತವನ್ನು ಪ್ರವೇಶಿಸಿದವು. ವ್ಯಾಪಾರ ಮತ್ತು ದೇಶದ ಸಂಪತ್ತಿನಲ್ಲಷ್ಟೇ ಆಸಕ್ತರಾಗಿದ್ದ ಬ್ರಿಟಿಷರಿಗಿಂತಲೂ ಅವರ ನೈತಿಕ ಬೆಂಬಲ ಪಡೆದಿದ್ದ ಮಿಷನರಿಗಳು ಶೈಕ್ಷಣಿಕವಾಗಿ ಹೊಸತೊಂದು ಕ್ರಾಂತಿಯನ್ನೇ ಹುಟ್ಟುಹಾಕಿದರು.

ಈ ರೀತಿಯ ಕರ್ನಾಟಕದ ಶೈಕ್ಷಣಿಕ ಕ್ರಾಂತಿಯ ಮೂಲವಾಗಿ ಬಳ್ಳಾರಿಯು ಕಂಡುಬರುತ್ತದೆ. ಬಳ್ಳಾರಿಯಲ್ಲಿ ಮಿಷನರಿಗಳು ಕೈಗೊಂಡಿದ್ದ ಕಾರ್ಯಗಳು ಕರ್ನಾಟಕದ ಶಿಕ್ಷಣ, ಮುದ್ರಣ, ಪತ್ರಿಕೋದ್ಯಮ ಇತಿಹಾಸದಲ್ಲಿ ಹಲವು ಪ್ರಥಮಗಳನ್ನು ದಾಖಲಿಸಿದೆ. ಈ ದಾಖಲೆಗಳನ್ನು ಒಳಗೊಂಡ ಬಳ್ಳಾರಿ ಕ್ರೈಸ್ತ ಮಿಷನರಿಗಳ ಸಾಧನೆಯನ್ನು ತಿಳಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ. ಅಲ್ಲದೆ ಈ ಮಿಷನರಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಆಯಾಮಗಳ ಕುರಿತಂತೆ ಬಳ್ಳಾರಿಯನ್ನು ಮುಖ್ಯವಾಗಿಟ್ಟುಕೊಂಡು ಯಾವ ಮಹತ್ವದ ಅಧ್ಯಯನಗಳು ನಡೆಯದೇ ಇರುವುದು ಸಹ ಈ ಅಧ್ಯಯನದ ಮಹತ್ವವನ್ನು ಹೆಚ್ಚಿಸಿದೆ.

ಕ್ರೈಸ್ತ ಮಿಷನರಿಗಳು ಎಂಬ ವಿಷಯದಡಿಯಲ್ಲಿ ಬಳ್ಳಾರಿಯನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನಿಸುವ ಮೂಲಕ ಬಳ್ಳಾರಿ ಜಿಲ್ಲೆಯ ಆಧುನಿಕ ಇತಿಹಾಸದ ಒಂದು ಮಗ್ಗುಲಾಗಿರುವ ಮಿಷನರಿ ಕಾರ್ಯಗಳ ಬಗ್ಗೆ, ಮಿಷನರಿಗಳ ಬಗ್ಗೆ ಮಾಹಿತಿ ಪೂರೈಸುವ ಕಿರುಯತ್ನವೂ ಇದಾಗಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಬಳ್ಳಾರಿಯ ಶಿಕ್ಷಣಪ್ರಗತಿಯಲ್ಲಿ ಮಿಷನರಿಗಳು ಮಹತ್ವದ ಪಾತ್ರವನ್ನು ವಹಿಸಿದ್ದರು. ವಿಶೇಷವಾಗಿ ಎಲ್ಲಾ ಪಾಠಗಳನ್ನು, ಆಧುನಿಕ ವಿಜ್ಞಾನ, ಭೂಗೋಳ ಇತ್ಯಾದಿಗಳನ್ನು ಶಾಸ್ತ್ರೀಯವಾಗಿ ಬೋಧಿಸಲು ತಳಹದಿ ಹಾಕಿದ್ದರು. ಅಲ್ಲದೆ ಈ ಶಾಲೆಗಳಲ್ಲಿ ಉತ್ತಮ ಶಿಸ್ತು ಮತ್ತು ಸುವ್ಯವಸ್ಥಿತ ಶಿಕ್ಷಣ ಕ್ರಮವನ್ನು ಜಾರಿಗೆ ತಂದರು. ಹಾಗಾಗಿ ಬಳ್ಳಾರಿ ಮಿಷನರಿಗಳ ಶಿಕ್ಷಣ ವ್ಯವಸ್ಥೆ ಕುರಿತಾದ ವಿಸ್ತೃತ ಅಧ್ಯಯನವು ಇಲ್ಲಿ ಮಹತ್ವದ್ದೆನಿಸುತ್ತದೆ.

ಈ ಅಧ್ಯಯನವನ್ನು ಮುಖ್ಯವಾದ ಮೂರು ಭಾಗಗಳಲ್ಲಿ ಪ್ರತ್ಯೇಕ ಅಧ್ಯಾಯಗಳಾಗಿಸಿಕೊಂಡು ವಿವರಿಸಲು ಉದ್ದೇಶಿಸಲಾಗಿದೆ. ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ ಮತ್ತು ಮಿಷನರಿಗಳ ಚಾರಿತ್ರಿಕ ಹಿನ್ನೆಲೆಯನ್ನು 'ಚಾರಿತ್ರಿಕ ಹಿನ್ನೆಲೆ' ಎಂಬ ಶೀರ್ಷಿಕೆಯಡಿಯಲ್ಲಿ ವಿವರಣೆ ನೀಡಲಾಗಿದೆ. ಜಿಲ್ಲಾ ಚಾರಿತ್ರಿಕ ಹಿನ್ನೆಲೆಯಲ್ಲಿ ಬಳ್ಳಾರಿಯು ಆದಿಯಿಂದ ಪ್ರಸ್ತುತದವರೆಗೆ ಚರಿತ್ರೆಯಲ್ಲಿ ದಾಖಲಾಗಿರುವ ಬಗೆಯನ್ನು ಮತ್ತು ಮಿಷನರಿ ಚಾರಿತ್ರಿಕ ಹಿನ್ನೆಲೆಯಲ್ಲಿ ಮಿಷನರಿಗಳು ಯುರೋಪಿನಲ್ಲಿ ಹುಟ್ಟಿಕೊಳ್ಳಲು ಕಾರಣವಾದ ಅಂಶಗಳನ್ನು ಮತ್ತು ಅವುಗಳು ಭಾರತದಾದ್ಯಂತ ಹರಡಿಕೊಂಡ ರೀತಿಯನ್ನು ಸಾಧ್ಯವಾದಷ್ಟು ವಿವರಿಸಲಾಗಿದೆ.

ಅಧ್ಯಯನ ವಿಷಯದ ಮುಖ್ಯಶೀರ್ಷಿಕೆಯನ್ನು ಕೇಂದ್ರೀಕರಿಸಿ ಪ್ರತ್ಯೇಕ ಅಧ್ಯಾಯ ಮಾಡಿಕೊಂಡು ಅದರಲ್ಲಿ ಬಳ್ಳಾರಿ ಪ್ರದೇಶದಲ್ಲಿ ಕಾರ್ಯನಿರ್ವಹಿಸಿದ ವಿವಿಧ ಮಿಷನ್‌ಗಳಿಗೆ ಸೇರಿದ ಮಿಷನರಿಗಳನ್ನು ಕುರಿತು ಅವರ ಸಾಧನೆಗಳನ್ನು ಕಾಲಾನುಕ್ರಮ ವಿಧಾನದಂತೆ ವಿವರಿಸಲಾಗಿದೆ. ಜಾನ್‌ಹ್ಯಾಂಡ್ಸ್, ವಿಲಿಯಂ ರೀವ್, ಜಾನ್‌ರೀಡ್, ವಾರ್ಡಲಾ ರವರುಗಳು ಇಲ್ಲಿ ಬರುವ ಪ್ರಮುಖರುಗಳಾಗಿದ್ದಾರೆ. ಸ್ವಾತಂತ್ರ್ಯೋತ್ತರದಲ್ಲಿ ಬಳ್ಳಾರಿಗೆ ಬಂದ ಮಿಷನ್‌ಗಳು ಸ್ಥಾಪನೆಯ ಹಿನ್ನೆಲೆಯೊಂದಿಗೆ ಇಂದು ಬಳ್ಳಾರಿಯ ಯಾವ ಯಾವ ಕೇಂದ್ರಗಳಲ್ಲಿ ಎಂತಹ ಸೇವೆಯನ್ನು ನೀಡುತ್ತಿವೆ ಎಂಬುದರ ಬಗ್ಗೆಯೂ ಇಲ್ಲಿ ತಿಳಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಮಿಷನರಿಗಳ ಸೇವೆಯ ಉದ್ದೇಶವಾದ ಮತಾಂತರ ಸಹಿತವಾಗಿ ಅವರುಗಳು ಕೈಗೊಂಡ ಸೇವಾ ಕಾರ್ಯಚಟುವಟಿಕೆಗಳಾದ ಶಿಕ್ಷಣ, ಮುದ್ರಣ, ಪತ್ರಿಕೋದ್ಯಮ, ಕೈಗಾರಿಕೆ, ವೈದ್ಯಕೀಯ ಎಂಬ ಉಪಭಾಗಗಳಾಗಿಸಿಕೊಂಡು ಬಳ್ಳಾರಿಯಲ್ಲಿ ಈ ಸೇವೆಗಳನ್ನು ಕುರಿತಂತೆ ಆರಂಭವಾದ ಕೇಂದ್ರಗಳು ಮತ್ತು ಇಂದಿಗೂ ಉಳಿದುಕೊಂಡಿರುವ ಕೇಂದ್ರಗಳ ಸಹಿತವಾದ ಮಾಹಿತಿಯನ್ನು ನೀಡಲಾಗಿದೆ. ಸಾಧ್ಯವಾದಷ್ಟು ಆ ಸೇವೆಯನ್ನು ಒದಗಿಸುತ್ತಿರುವ ಮಿಷನರಿಗಳನ್ನು ಅವರ ಮಿಷನ್‌ಗಳ ಪೀಠಿಕೆಯೊಂದಿಗೆ ಅವರಲ್ಲಿ ಸೇವಾಸೌಲಭ್ಯ ಪಡೆಯುತ್ತಿರುವ ಫಲಾನುಭವಿಗಳ ಸಂಖ್ಯೆಯನ್ನು ಸಹ ಪಟ್ಟಿಯ ಮೂಲಕ ನೀಡಲಾಗಿದೆ.

ಕ್ರೈಸ್ತ ಧರ್ಮವು ಪ್ರಪಂಚದ ಬಹುದೊಡ್ಡ ಧರ್ಮವಾಗಿದೆ. ಈ ಧರ್ಮಕ್ಕೆ ಸೇರಿದ ಸುಮಾರು ೧೩೭೫೦ (ಶೇ ೦.೬೫) ಕ್ರೈಸ್ತರು ಇಂದು ಬಳ್ಳಾರಿಯಲ್ಲಿದ್ದಾರೆ. ಸುಮಾರು ೨೦೦ ಕ್ಕೂ ಹೆಚ್ಚಿನ ಪ್ರಾಟೆಸ್ಟೆಂಟ್ ಮತ್ತು ಕ್ಯಾಥೋಲಿಕ್ ಗುರುಗಳು ಬಳ್ಳಾರಿ ಪ್ರದೇಶದ ಧರ್ಮ ಸೇವೆಯಲ್ಲಿ ತೊಡಗಿದ್ದಾರೆ. ಸುಮಾರು ೧೮,೦೦೦ ವಿದ್ಯಾರ್ಥಿಗಳು ಕ್ರೈಸ್ತ ಮಿಷನರಿ ಶಾಲೆಗಳಲ್ಲಿ ಅಭ್ಯಸಿಸುತ್ತಿದ್ದಾರೆ. ಅಲ್ಲದೆ ಸುಮಾರು ೮೦೦ ಜನ ಮಿಷನರಿಗಳು ನೀಡುತ್ತಿರುವ ಇನ್ನಿತರ ಸೇವೆಗಳ ಅನುಕೂಲಗಳನ್ನು ಪಡೆಯುತ್ತಿದ್ದಾರೆ. ಸಂಖ್ಯೆಯಾಧಾರಿತ ಈ ಮೇಲಿನವರುಗಳಲ್ಲಿ ಬಹುಸಂಖ್ಯೆಯ ಜನರಿಗೆ ಬಳ್ಳಾರಿಯ ಕ್ರೈಸ್ತರ ಹಿನ್ನೆಲೆಯು ತಿಳಿದಿಲ್ಲ. ಮತ್ತು ಮಿಷನರಿಗಳ ಸೇವೆಯನ್ನು ಎಂದಿನಿಂದ ಮತ್ತು ಯಾಕಾಗಿ ನೀಡಲಾಗುತ್ತಿದೆಯೆಂಬುದರ ಬಗ್ಗೆಯೂ ಅವರಲ್ಲಿ ಸ್ಪಷ್ಟ ಅರಿವಿಲ್ಲ. ಹಾಗೆಯೇ ಈ ವಿವರಗಳು ಕ್ರೈಸ್ತ ಮಿಷನರಿಗಳ ಕುರಿತಂತೆ ಚರಿತ್ರೆಯ ಅಧ್ಯಯನದ ವ್ಯಾಪ್ತಿಗೂ ನಿಲುಕುವುದು ಸೂಕ್ತವೆಂದು ಭಾವಿಸಿ ಈ ಬಗ್ಗೆ ಮಾಹಿತಿ ನೀಡುವ ಮಹತ್ತರ ಉದ್ದೇಶವನ್ನು ಈ ನಿಬಂಧ ಹೊಂದಿದೆ.

**ಅಧ್ಯಯನದ ವಿಧಾನ**

ಬಳ್ಳಾರಿ ಜಿಲ್ಲೆಯ ಕ್ರೈಸ್ತ ಮಿಷನರಿಗಳ ಕುರಿತಾದ ಅಧ್ಯಯನವು ಚಾರಿತ್ರಿಕವಾಗಿದ್ದು, ಸಂಶೋಧನಾ ಕ್ರಮಗಳನ್ನು ಇಲ್ಲಿ ಅನುಸರಿಸಲಾಗಿದೆ. ಈವರೆಗೆ ಮಿಷನರಿಗಳಿಗೆ ಸಂಬಂಧಿಸಿದಂತೆ ಕೈಗೊಳ್ಳಲಾಗಿರುವ ಧಾರ್ಮಿಕ ಅಥವಾ ಭೌಗೋಳಿಕ ಅಥವಾ ಸೇವಾವಿಷಯ ಆಧಾರಿತ ಸಂಶೋಧನಾ ಕೃತಿಗಳು ಮತ್ತು ಪ್ರಬಂಧಗಳನ್ನು

ಗಣನೆಗೆ ತೆಗೆದುಕೊಂಡು ಈ ಅಧ್ಯಯನ ನಡೆಸಲಾಗಿದೆ. ಈ ಅಧ್ಯಯನಕಾರರಲ್ಲಿ ಐ. ಮಾ. ಮುತ್ತಣ್ಣ, ಡಾ. ಅಂತಪ್ಪ ಐ., ಶ್ರೀನಿವಾಸ ಹಾವನೂರ, ಡಾ. ಪಿಯೂಸ್ ಫಿಡೆಲಿಸ್, ಫಾ. ಕೆ. ಎ. ಮ್ಯಾಥ್ಯೂ, ಮುಂತಾದವರುಗಳು ಮುಖ್ಯರಾಗಿದ್ದಾರೆ. ಇವರು ಅನುಸರಿಸಿದ ಅಧ್ಯಯನ ವಿಧಾನಗಳನ್ನು ಪರಿಶೀಲಿಸುತ್ತಲೇ ರಾಷ್ಟ್ರೀಯ, ಅಂತರರಾಷ್ಟ್ರೀಯ ವಿಶ್ವಕೋಶ ಸಂಪುಟಗಳನ್ನು, ಕರ್ನಾಟಕ ಚರಿತ್ರೆ ಸಂಪುಟಗಳನ್ನು ಮತ್ತು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಹಾಗೂ ಧರ್ಮ ವಿಶ್ವಕೋಶಗಳನ್ನು ಪರಾಮರ್ಶಿಸಿ, ಅಧ್ಯಯನ ಕ್ಷೇತ್ರದ ವಿಷಯ ಹಾಗೂ ಸ್ವರೂಪಕ್ಕನುಗುಣವಾಗಿ ಮತ್ತು ಲಭ್ಯವಿರುವ ಮಾಹಿತಿಗಳನ್ನು ಆಧರಿಸಿ ಅಧ್ಯಯನ ವಿಧಾನವನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಕ್ರೈಸ್ತ ಮಿಷನರಿಗಳ ಕುರಿತಾದ ಇತ್ತೀಚಿನ ಮಾಹಿತಿಗಳನ್ನು ಬಳ್ಳಾರಿ ಧರ್ಮಕ್ಷೇತ್ರದಲ್ಲಿ ನಡೆಯುವ ವಾರ್ಷಿಕ ಸಮ್ಮೇಳನಗಳಲ್ಲಿ ಭಾಗವಹಿಸಿ ಅಲ್ಲಿ ಬಿಡುಗಡೆಯಾಗುವ ಡೈರಕ್ಟರಿಗಳು ಮತ್ತು ಸ್ಮರಣ ಸಂಚಿಕೆಗಳಿಂದಲೂ ಹಾಗೂ ಸಂದರ್ಶನ ವಿಧಾನದ ಮೂಲಕವೂ ಸಂಗ್ರಹಿಸಲಾಗಿದೆ. ಈಗಲೂ ಕ್ರೈಸ್ತ ಸೇವಾಕೇಂದ್ರಗಳಲ್ಲಿ ನಿರತರಾದ ಮತ್ತು ಅತ್ಯುತ್ತಮ ಸೇವಾ ಸಾಧನೆಗಳನ್ನು ಮಾಡಿದ ವ್ಯಕ್ತಿಗಳನ್ನೂ ಸಹ ಮಿಷನರಿಗಳೆಂದು ಗೌರವಿಸುವುದುಂಟು. ಅಂತಹ ಮಿಷನರಿಗಳಾದ ಫಾ. ವಿಜಯ್ ಕುಮಾರ್ ಪಿ., ಫಾ. ಮಾರ್ಕ್, ಫಾ. ಓ. ವಿನ್ಸೆಂಟ್, ಫಾ. ಎನ್. ಸಭಾಪತಿ, ಫಾ. ಜೆ. ಪ್ರಕಾಶ್ ಫ್ರಾನ್ಸಿಸ್ ಇವರುಗಳನ್ನು ಅಧ್ಯಯನದ ಮಾಹಿತಿಗಾಗಿ ಸಂದರ್ಶಿಸಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಪ್ರಬಂಧವು ಕಾಲದ ಮತ್ತು ಪ್ರದೇಶದ ಚೌಕಟ್ಟಿಗೆ ಒಳಪಟ್ಟಿದೆ. ೧೮೦೦ ರಿಂದ ಅಂದರೆ ಬಳ್ಳಾರಿಯು ಮದ್ರಾಸ್ ಪ್ರೆಸಿಡೆನ್ಸಿಗೆ ಒಳಪಟ್ಟಾಗಿನಿಂದ ಸ್ವಾತಂತ್ರ್ಯ ಬಂದ ೧೯೪೭ ರವರೆಗಿನ ಕಾಲವನ್ನು ಅಧ್ಯಯನದ ಕಾಲವ್ಯಾಪ್ತಿಯಾಗಿ ಇಟ್ಟುಕೊಳ್ಳಲಾಗಿದೆಯಾದರೂ ಪ್ರಸ್ತುತ ಸಂದರ್ಭದಲ್ಲಿಯೂ ಉಳಿದಿರುವ ಮಿಷನರಿಗಳ ಕೊಡುಗೆಗಳನ್ನು ಪರಿಗಣಿಸಿದ ಕಾರಣ ೨೦೦೬ ರವರೆಗೆ ಅದು ವಿಸ್ತರಿಸಲ್ಪಟ್ಟಿದೆ. ಸುಮಾರು ೮,೪೧೧ ಚ.ಕಿ.ಮೀ. ವಿಸ್ತೀರ್ಣದ ಬಳ್ಳಾರಿ, ಹೊಸಪೇಟೆ, ಸಂಡೂರು, ಸಿರುಗುಪ್ಪ, ಕೂಡ್ಲಿಗಿ, ಹೂವಿನ ಹಡಗಲಿ, ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಒಳಗೊಂಡ ೧೯೯೭ ರ ನಂತರದ ಬಳ್ಳಾರಿ ಜಿಲ್ಲೆಯನ್ನು ಭೌಗೋಳಿಕ ವ್ಯಾಪ್ತಿಯಾಗಿಟ್ಟುಕೊಂಡು ಅಧ್ಯಯನ ನಡೆಸಲಾಗಿದೆ.

ಬಳ್ಳಾರಿ ಎಂಬುದು ಜಿಲ್ಲಾ ಕೇಂದ್ರದ ಹೆಸರಾಗಿದೆ. ಈ ಪ್ರದೇಶಕ್ಕೆ ಬಳ್ಳಾರಿ ಎಂಬ ಹೆಸರು ಕ್ರಿ.ಶ. ಹನ್ನೆರಡನೆಯ ಶತಮಾನದಿಂದ ಬಳಕೆಯಲ್ಲಿರುವುದು ಈವರೆಗೆ ಸಿಕ್ಕಿರುವ ಸಾಕ್ಷಾಧಾರಗಳಿಂದ ತಿಳಿದುಬರುತ್ತದೆ. ಬೈಲೂರಿನಲ್ಲಿ ದೊರೆತಿರುವ ಕ್ರಿ.ಶ. ೧೧೩೧ ರ ಶಾಸನ ಮತ್ತು ಕ್ರಿ.ಶ. ೧೧೮೩ ರ ಹೊಯ್ಸಳರ ವಿಷ್ಣುವರ್ಧನನ ಆಳ್ವಿಕೆಯ ಅವಧಿಯ ಶಾಸನ ಹಾಗೂ ಅದೇ ಆಸುಪಾಸಿನ ಅವಧಿಯ ಸಿಂಧಿಗೇರಿ, ಕೋಳೂರು, ಕುರುಗೋಡು ಶಾಸನಗಳಲ್ಲಿ ಬಲ್ಲಾರಿ (Ballare) ಎಂದು ಉಲ್ಲೇಖಿಸಲಾಗಿದೆ.[೧]

ಬಳ್ಳಾರಿ ಎಂಬ ಹೆಸರು ಬರಲು ಕಾರಣವೇನೆಂದು ಹುಡುಕುತ್ತಾ ಹೋದರೆ ಇಂದಿನ ನಗರದ ಪ್ರಮುಖ ದೇವಾಲಯಗಳಾದ ಕೋಟೆಯ ಮಲ್ಲೇಶ್ವರ ದೇವಸ್ಥಾನ ಮತ್ತು ಗಾಂಧಿನಗರದ ದುರ್ಗಮ್ಮ ದೇವಸ್ಥಾನಗಳ ಹಿನ್ನೆಲೆಯನ್ನು ಕೂಡಿ ಬಂದದ್ದು ಎಂದು ಪುರಾಣಗಳು ತಿಳಿಸುತ್ತವೆ. ದಕ್ಷಿಣ ಭಾರತದ ಇತಿಹಾಸದಲ್ಲಿ ಬಳ್ಳಾರಿಯು ಪ್ರತಿ ಕಾಲಘಟ್ಟದಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ ತನ್ನನ್ನು ಗುರುತಿಸಿಕೊಂಡು ಬಂದಿದೆ. ಪ್ರಮುಖ ಎರಡು ಕಾಲಘಟ್ಟಗಳಲ್ಲಿಯೂ ಅತಿ ಮುಖ್ಯಪಾತ್ರವಹಿಸಿದೆ. ಅದರಲ್ಲಿ ಒಂದು ವಿಜಯನಗರ ಆಳ್ವಿಕೆಯ ಅವಧಿ, ಎರಡನೆಯದು ೧೯ನೇ ಶತಮಾನದ ವಸಾಹತು ಸಂದರ್ಭದ ಮಿಷನರಿಗಳ ಅವಧಿ. ಒಟ್ಟಾರೆ ಪುರಾಣಗಳ ಕಾಲದಿಂದ ಇಲ್ಲಿಯವರೆಗೆ ಇತಿಹಾಸದಲ್ಲಿ ಬಳ್ಳಾರಿಯು ನಿರ್ವಹಿಸಿದ ಪಾತ್ರವನ್ನು ಕಾಲಾನುಕ್ರಮವಾಗಿ ಈ ಮುಂದಿನಂತೆ ಕಾಣಬಹುದು.

### ೨.೧ ಬಳ್ಳಾರಿ ಜಿಲ್ಲಾ ಚಾರಿತ್ರಿಕ ಹಿನ್ನೆಲೆ

#### ಇತಿಹಾಸಪೂರ್ವ ಕಾಲ

ಪ್ರಾಕ್ತನ ಅನ್ವೇಷಣೆಗಳಿಂದ ಜಿಲ್ಲೆಯ ಬಳ್ಳಾರಿ, ಕಪ್ಪಗಲ್ಲು, ಸಂಗನಕಲ್ಲು, ಕುರೆಕುಪ್ಪಿ, ಹಲಕುಂದಿ,ಗಾದಿಗನೂರು ಮುಂತಾದ ಪ್ರಮುಖ ಪ್ರದೇಶಗಳು ಸೇರಿದಂತೆ ಲೋಹಯುಗದ ಸುಮಾರು ಎಪ್ಪತ್ತಕ್ಕೂ ಹೆಚ್ಚಿನ ನಿವೇಶನಗಳನ್ನು ಬಳ್ಳಾರಿ ಜಿಲ್ಲಾ ವ್ಯಾಪ್ತಿಯಲ್ಲಿ ಗುರುತಿಸಲಾಗಿದೆ. ಹಳೆ ಶಿಲಾಯುಗ, ಮಧ್ಯಶಿಲಾಯುಗ, ನವಶಿಲಾಯುಗ ಜನಗಳು ಇಲ್ಲಿ ಜೀವಿಸಿದ್ದರು ಎಂಬುದಕ್ಕೆ ಸೂಕ್ತ ಸಾಕ್ಷಾಧಾರಗಳು ದೊರಕಿವೆ. ಪಶ್ಚಿಮ ಏಷ್ಯಾ ಮತ್ತು ಆಫ್ರಿಕಾಗಳಲ್ಲಿ ಮಾತ್ರ ಕಂಡುಬಂದಿದ್ದ ಬೃಹತ್ ಶಿಲಾಯುಗ ಸಂಸ್ಕೃತಿಯು ದಕ್ಷಿಣ ಭಾರತದಲ್ಲಿ ಅದರಲ್ಲೂ ಬಳ್ಳಾರಿಯಲ್ಲಿ ಆ ಸಂಸ್ಕೃತಿಯ ಜೀವಂತಿಕೆಯನ್ನು ಗುರುತಿಸಲಾಗಿದೆ. ಬಳ್ಳಾರಿಯಲ್ಲಿ ಕ್ಷೇತ್ರಕಾರ್ಯವನ್ನು ನಡೆಸಿದ ಖ್ಯಾತ ಪ್ರಾಕ್ತನ ಶಾಸ್ತ್ರಜ್ಞರಾದ ರಾಬರ್ಟ್ ಬ್ರೂಸ್‌ಪುಟ್ ರವರು 'ಇತಿಹಾಸ ಪೂರ್ವ ಅವಧಿಗೆ ಸಂಬಂಧಿಸಿದಂತೆ ಬಳ್ಳಾರಿಯು ಶ್ರೀಮಂತವಾಗಿದೆ'[೨] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಮಹಾಕಾವ್ಯಯುಗದಲ್ಲಿಯೂ 'ರಾಮಾಯಣ'ದಲ್ಲಿ ಉಲ್ಲೇಖಿತವಾಗಿರುವ ಕೆಲ ಭೌಗೋಳಿಕ ಲಕ್ಷಣಗಳನ್ನು ಆಧರಿಸಿ ಶ್ರೀರಾಮನು ವನವಾಸ ಸಂದರ್ಭದಲ್ಲಿ ಸೀತೆಯನ್ನು ಹುಡುಕುತ್ತಾ ವಾನರರಾದ ಸುಗ್ರೀವ ಮತ್ತು ಹನುಮಾನರನ್ನು ಮೊದಲ ಬಾರಿಗೆ ಸಂಧಿಸಿದ ಕಿಷ್ಕಂಧವು ಇಂದಿನ ಹಂಪಿ ಬಳಿಯ ಪ್ರದೇಶ ಎಂದು ಗುರುತಿಸಿದ್ದಾರೆ.

#### ಇತಿಹಾಸ ಕಾಲ

ಇತಿಹಾಸ ಕಾಲ ಆರಂಭದ ಸಂಕೇತವಾಗಿರುವ ನಂದರು ಮತ್ತು ಮೌರ್ಯರ ರಾಜವಂಶಗಳಲ್ಲಿ ನಂದರ ಕುರಿತಂತೆ ದಕ್ಷಿಣ ಭಾರತದಲ್ಲಿ ಅವರು ನೇರ ಆಳ್ವಿಕೆ ನಡೆಸಿದ್ದರ ಬಗ್ಗೆ ಮಾಹಿತಿ ಇಲ್ಲ. ಬಳ್ಳಾರಿ ಪ್ರದೇಶದಲ್ಲೂ

ಇದಕ್ಕೆ ಪೂರಕವಾಗುವ ಪ್ರಾಕ್ತನಾಧಾರಗಳು ಪತ್ತೆಯಾಗಿಲ್ಲ. ಮೌರ್ಯರ ಕುರಿತಂತೆ ಈ ರೀತಿಯ ಅನುಮಾನದ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಬಳ್ಳಾರಿಯ ಉದೇಗೊಳಂ, ನಿಟ್ಟೂರು ಒಳಗೊಂಡಂತೆ ಜಿಲ್ಲೆಯ ನಾಲ್ಕು ದಿಕ್ಕುಗಳಲ್ಲಿ ಗಡಿಗೆ ಬಹಳ ಹತ್ತಿರದ ಪ್ರದೇಶಗಳಲ್ಲಿ ಮೌರ್ಯರ ಅಶೋಕನ ಶಾಸನಗಳು ಪತ್ತೆಯಾಗಿವೆ. ಬಳ್ಳಾರಿ ಪ್ರದೇಶ ಮೌರ್ಯ ಸಾಮ್ರಾಜ್ಯದಲ್ಲಿ ಸೇರಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಶೋಕನ ನಿಧನದ ಅರ್ಧ ಶತಮಾನದ ನಂತರ (ಸು. ಕ್ರಿ.ಪೂ. ೧೮೧) ಮೌರ್ಯ ವಂಶವು ಅವನತಿಯಾಯಿತು. ತದನಂತರ ದಕ್ಷಿಣ ಭಾರತದಲ್ಲಿ ಕುಶಾನರ ಸಮಕಾಲೀನರಾಗಿ ಅಧಿಕಾರಕ್ಕೆ ಬಂದ ಶಾತವಾಹನರು ಆಂಧ್ರ ಭೃತ್ಯಗಳೆಂದು ಕರೆದುಕೊಂಡಿದ್ದರೂ ಇತಿಹಾಸಕಾರರ ಒಂದು ವರ್ಗ ಶಾತವಾಹನರು ಕರ್ನಾಟಕ ಮೂಲದವರು ಎಂದು ವಾದಿಸುತ್ತದೆ. ಸುಮಾರು ೪೫೦ ವರ್ಷಗಳ ದೀರ್ಘ ಅವಧಿಗೆ ಆಳ್ವಿಕೆ ನಡೆಸಿದ ಶಾತವಾಹನರ ಸಾಮ್ರಾಜ್ಯದ ವ್ಯಾಪ್ತಿಯಲ್ಲಿ ಬಳ್ಳಾರಿಯೂ ಸೇರಿದ್ದಿತು. ಶಾತವಾಹನರ ಕೊನೆಯ ದೊರೆಗಳಲ್ಲಿ ಒಬ್ಬನಾದ ಬಹುಶಃ ಪುಲುಮಾಯಿ ಅವಧಿಗೆ ಸಂಬಂಧಿಸಿದ ಶಾಸನವೊಂದು ಬಳ್ಳಾರಿಯಲ್ಲಿ ದೊರೆತಿದೆ.

ಸ್ಥಳೀಯ ಮೂಲದ ಕನ್ನಡದ ಮೊದಲ ರಾಜವಂಶವಾದ ಕದಂಬರು ಬಳ್ಳಾರಿಯನ್ನು ಒಳಗೊಂಡ ಸಾಮ್ರಾಜ್ಯದ ಒಡೆಯರಾಗಿದ್ದರು. ಕದಂಬರ ಪೂರ್ವ ಪ್ರಾಂತ್ಯದ ರಾಜಧಾನಿಯಾದ ಉಚ್ಚಂಗಿದುರ್ಗವು ಬಳ್ಳಾರಿಗೆ ಹತ್ತಿರದ ಪ್ರದೇಶವಾಗಿದೆ. ಈಗಿನ ಸಂಡೂರು ಬೆಟ್ಟದಲ್ಲಿರುವ ಕಾರ್ತಿಕೇಯ ದೇವಸ್ಥಾನವು ಕದಂಬರ ಆಧಾರಗಳಲ್ಲಿ ಸ್ವಾಮಿಮಲ್ಯೆ ಎಂದು ಉಲ್ಲೇಖಿತವಾಗಿದೆ. ಕದಂಬರನ್ನು ಜಯಿಸಿ ಅಧಿಕಾರಕ್ಕೆ ಬಂದ ಬಾದಾಮಿ ಕೇಂದ್ರಿತ ಚಾಲುಕ್ಯರು ಬಳ್ಳಾರಿಯನ್ನು ಒಳಗೊಂಡಂತೆ ಆಂಧ್ರದ ಕರ್ನೂಲಿನವರೆಗೂ ಸಾಮ್ರಾಜ್ಯ ವಿಸ್ತರಿಸಿದ್ದರು. ಈ ವಂಶದ ಪ್ರಸಿದ್ಧ ಅರಸ ಇಮ್ಮಡಿ ಪುಲಿಕೇಶಿಯು ಬಾಣ ದೊರೆ ರಣವಿಕ್ರಮನನ್ನು ಸೋಲಿಸಲು ಬಳ್ಳಾರಿಗೆ ಬಂದಿದ್ದುದಾಗಿ ತಿಳಿದುಬರುತ್ತದೆ. ಮುಂದುವರೆದಂತೆ ಇಮ್ಮಡಿ ಪುಲಕೇಶಿಯ ಪುತ್ರರಾದ ಆದಿತ್ಯರಾಮ ಮತ್ತು ಚಂದ್ರಾದಿತ್ಯರು ಬಳ್ಳಾರಿ ಭಾಗದ ಪ್ರಾಂತೀಯ ಅಧಿಕಾರಿಗಳಾಗಿದ್ದರು ಎಂದು ಕುರುಗೋಡಿನಲ್ಲಿ ದೊರೆತಿರುವ ಚಾಲುಕ್ಯರ ಶಾಸನವು ತಿಳಿಸುತ್ತದೆ.

ಕ್ರಿ.ಶ. ೭೫೩ ರ ಅನಂತರ ಗುಲ್ಬರ್ಗಾದ ಮಳಖೇಡವನ್ನು ರಾಜಧಾನಿಯನ್ನಾಗಿಸಿಕೊಂಡು ದಂತಿದುರ್ಗನ ನೇತೃತ್ವದಲ್ಲಿ ರಾಷ್ಟ್ರಕೂಟರು ಅಧಿಕಾರ ಸ್ಥಾಪಿಸಿದರು. ಒಂಬತ್ತನೇ ಶತಮಾನದ ಆದಿಗೆ ಈ ವಂಶದ ಧ್ರುವನು ಆಳುತ್ತಿದ್ದ ನೊಳಂಬವಾಡಿ ಪ್ರಾಂತ್ಯವು ಬಳ್ಳಾರಿಯ ಭಾಗಗಳನ್ನು ಒಳಗೊಂಡಿದ್ದಿತು. ಪ್ರಬಲ ಚಾಲುಕ್ಯರ ಸಾಮಂತರಾಗಿ ಉಳಿದ ರಾಷ್ಟ್ರಕೂಟರ ಮೂರನೇ ಕೃಷ್ಣ ಕೋಗಳಿ ೫೦೦ ಪ್ರದೇಶದ ಒಡೆಯ ಆಗಿದ್ದನು. ಕೋಗಳಿಯು ಹಡಗಲಿ ಪ್ರದೇಶದಿಂದ ಕೂಡಿತ್ತು. ಈ ಬಗ್ಗೆ ಕುಡುತಿನಿ ಶಾಸನವು ಸಾಕ್ಷಿಯಾಗಿದೆ. ಮೂರನೇ ಕೃಷ್ಣನ ನಂತರ ಹಡಗಲಿಯು ಕೊಟ್ಟಿಗನ ವ್ಯಾಪ್ತಿಗೆ ಬಂದಿತು. ಕೊಟ್ಟಿಗನ ಸಾಮಂತನಾಗಿದ್ದ ಭೂತುಗದೇವನನ್ನು ಗಂಗರ ಪಾಂಚಾಲದೇವ ಸೋಲಿಸಿದನು. ಸೋತ ಭೂತುಗದೇವ ಅಹವಮಲ್ಲನೆನ್ನಿಸಿದ ಕಲ್ಯಾಣ ಚಾಲುಕ್ಯರ ಎರಡನೇ ತೈಲಪನ ಬೆಂಬಲ ಪಡೆದು ಕೋಗಳಿ ಪ್ರದೇಶವನ್ನು ಮರುವಶಪಡಿಸಿಕೊಂಡನು. ಅಧೀನನಾದ ಭೂತುಗದೇವ ಕಲ್ಯಾಣ ಚಾಲುಕ್ಯ ವ್ಯಾಪ್ತಿಯ ತೋರಗಲ್ಲು ಪ್ರದೇಶದ ರಾಜ್ಯಪಾಲನಾಗಿ ನಿಯುಕ್ತನಾದನು.

ರಾಷ್ಟ್ರಕೂಟರ ಅವಧಿಯ ಪ್ರಮುಖ ಪ್ರಾಂತ್ಯವಾಗಿದ್ದ ನೊಳಂಬವಾಡಿಯು ಕ್ರಿ.ಶ. ಎಂಟನೇ ಶತಮಾನದಿಂದಲೂ ಅವರ ಸಾಮಂತರಾದ ನೊಳಂಬರು ಆಳುತ್ತಿದ್ದರು. ನೊಳಂಬವಾಡಿ ೩೨೦೦೦ ಎಂದು ಪ್ರಸಿದ್ಧವಾದ ಈ ಪ್ರದೇಶವು ಬಳ್ಳಾರಿಯ ಹಡಗಲಿ, ಕಂಪಿಲಿ ಮತ್ತು ಪೂರ್ವ ಬಳ್ಳಾರಿ ಜಿಲ್ಲೆಯ ತಾಲ್ಲೂಕಾದ ಹರಪನಹಳ್ಳಿಯ ಉಚ್ಚಂಗಿದುರ್ಗವು ಪ್ರಮುಖ ಪಟ್ಟಣಗಳಾಗಿದ್ದವು. ಚೋಳರು ಸಹ ಬಳ್ಳಾರಿಯನ್ನು ಆಳಿದ್ದರು. ಕ್ರಿ.ಶ. ಹನ್ನೊಂದನೆ ಶತಮಾನದ ಮಧ್ಯಾವಧಿಯಲ್ಲಿ ಕಂಪಿಲಿಯನ್ನು ಚೋಳರು ವಶಪಡಿಸಿಕೊಂಡಿದ್ದಾಗಿ ಕಂಡುಬರುತ್ತದೆ. ತಲಕಾಡಿನ ಗಂಗರು ಬಳ್ಳಾರಿ ಜಿಲ್ಲೆಯ ಕೆಲ ಪ್ರದೇಶಗಳನ್ನು ನೊಳಂಬರೊಂದಿಗಿನ ವೈವಾಹಿಕ ಸಂಬಂಧದ ಮೂಲಕ ತಮ್ಮ ವ್ಯಾಪ್ತಿಗೆ ತೆಗೆದುಕೊಂಡಿದ್ದರು. ತಟಾಕ ಎಂದು ಕರೆಯಲ್ಪಡುತ್ತಿದ್ದ ಪ್ರದೇಶದಲ್ಲಿ

ರಾಷ್ಟ್ರಕೂಟರ ಕೃಷ್ಣನು ಕುಮಾರಸ್ವಾಮಿ ದೇವನಿಗೆ ದತ್ತಿ ನೀಡಿದ್ದರ ಬಗ್ಗೆ ತಿಳಿದುಬರುತ್ತದೆ. ಇದು ಬಹುಶಃ ಇಂದಿನ ಸಂಡೂರು ಬಳಿಯ ತಾರಾನಗರ ಆಗಿರಬಹುದೆಂದು ಇತಿಹಾಸಕಾರರ ಅಭಿಪ್ರಾಯ. ಎರಡನೇ ತೈಲಪನಿಂದಾಗಿ ಅಧಿಕಾರಕ್ಕೆ ಬಂದ ಕಲ್ಯಾಣಿಯ ಚಾಲುಕ್ಯರು ಬಳ್ಳಾರಿ ಜಿಲ್ಲೆಯ ಎಲ್ಲಾ ಪ್ರದೇಶದ ಮೇಲೆ ತಮ್ಮ ನಿಯಂತ್ರಣವನ್ನು ಬಹುಬೇಗ ಸಾಧಿಸಿದ್ದರು. ಬಾಗಳಿಯ ಎರಡು ಶಾಸನಗಳಿಂದ ಅರಸ ಐದನೇ ವಿಕ್ರಮಾದಿತ್ಯನ ಅಧೀನದಲ್ಲಿ ನೊಳಂಬವಾಡಿ ೩೨೦೦೦, ಕೋಗಳಿ ೫೦೦, ಬಲಕುಂದಿ ೩೦೦ ಮತ್ತು ಕುರುಗೋಡು ಪಟ್ಟಣಗಳನ್ನು ಇರಿವ ನೊಳಂಬಾದಿರಾಜ ಎಂಬುವನು ಸಾಮಂತನಾಗಿ ಆಳುತ್ತಿದ್ದನು ಎಂದು ತಿಳಿಯಲಾಗಿದೆ. ಕ್ರಿ.ಶ. ೧೦೪೫ ರಲ್ಲಿ ಚಾಲುಕ್ಯರ ಮತ್ತು ಚೋಳರ ಮಧ್ಯೆ ಆದ ಯುದ್ಧದಲ್ಲಿ ರಾಜೇಂದ್ರ ಚೋಳನು ನೊಳಂಬವಾಡಿಯನ್ನು ಗೆದ್ದು, ಬಳ್ಳಾರಿಯ ಕಂಪಿಲಿಯನ್ನು ಹಾಳುಮಾಡಿದನು. ಕ್ರಿ.ಶ. ೧೧೪೮ ರ ಉರುವಾಯಿ ಶಾಸನದಲ್ಲಿ ಉಲ್ಲೇಖಿತವಾದ ದೋರವಾಡಿ ಪ್ರದೇಶವು ಇಂದಿನ ಸಂಡೂರು ಶ್ರೀ ಕಾರ್ತಿಕೇಯ ಸ್ವಾಮಿ ದೇವಾಲಯದ ನಾಡೆಂದು ತಿಳಿಯಲಾಗಿದೆ(ಆರನೇ ವಿಕ್ರಮಾದಿತ್ಯನ ನಂತರದ ಅಲ್ಪಾವಧಿಗೆ ಹೊಯ್ಸಳರ ವಿಷ್ಣುವರ್ಧನನು ಉಚ್ಚಂಗಿದುರ್ಗವನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿದ್ದನು). ರಾಜ ವೀರಪಾಂಡ್ಯನು ನೊಳಂಬವಾಡಿಯನ್ನು ಕಲಚೂರಿ ಅರಸ ಬಿಜ್ಜಳನ ಸಾಮಂತನಾಗಿ ಆಳುವ ಮೂಲಕ ಪಾಂಡ್ಯರೂ ಸಹ ಬಳ್ಳಾರಿ ಭಾಗವನ್ನು ಆಳ್ವಿಕೆ ನಡೆಸಿದ್ದು ಸ್ಪಷ್ಟವಾಗುತ್ತದೆ. ಕುರುಗೋಡಿನ ಶಾಸನವೊಂದು ನಾಲ್ಕನೇ ಸೋಮೇಶ್ವರನು ಮತ್ತು ನಂತರ ಸಿಂಧವಾಡಿ ರಾಚಮಲ್ಲನು ಕುರುಗೋಡನ್ನು ಆಳಿದ್ದುದಕ್ಕೆ ಸಾಕ್ಷಿಯಾಗಿದೆ.

### ಮಧ್ಯಕಾಲ

ಮಧ್ಯಕಾಲೀನ ಇತಿಹಾಸದಲ್ಲಿ ಕರ್ನಾಟಕದ ಆರಂಭಿಕ ರಾಜವಂಶವಾಗಿ ಕಂಡುಬರುವ ಹೊಯ್ಸಳರು ತಮ್ಮ ಸಾಮ್ರಾಜ್ಯವನ್ನು ಉತ್ತರದಲ್ಲಿ ಬಳ್ಳಾರಿಯವರೆಗೆ ವಿಸ್ತರಿಸಿದ್ದರು. ಬಿಟ್ಟಿದೇವ ಖ್ಯಾತಿಯ ವಿಷ್ಣುವರ್ಧನನು ತುಂಗಭದ್ರಾ ಪ್ರದೇಶದವರೆಗೆ ದಾಳಿ ನಡೆಸಿ ಕಂಪಿಲ, ಬಳ್ಳಾರಿ, ರಾಯಚೂರು ಕೋಟೆಗಳನ್ನು ಸಾಮ್ರಾಜ್ಯದ ಉತ್ತರ ಗಡಿಯಾಗಿಸಿಕೊಂಡಿದ್ದನು. ವೀರಬಲ್ಲಾಳನ ಅವಧಿಯಲ್ಲಿ ಸ್ವತಂತ್ರಗೊಂಡ ಹೊಯ್ಸಳರು ಉಚ್ಚಂಗಿದುರ್ಗವನ್ನು ವಶಪಡಿಸಿಕೊಂಡು ಉತ್ತರ ಪ್ರಾಂತ್ಯದ ಪ್ರಮುಖ ಪಟ್ಟಣವಾಗಿ ಮಾಡಿಕೊಂಡು ರಾಜ್ಯವಾಳಿದ್ದು ಗೊತ್ತಾಗುವುದು. ಜಿಲ್ಲೆಯ ಕುರುಗೋಡು ಮತ್ತು ಕಂಪಿಲಿಗಳಲ್ಲಿ ದೊರೆತ ಶಾಸನಗಳಲ್ಲಿ ವೀರಬಲ್ಲಾಳನು ಸ್ವಾಮಿ ಕಾರ್ತಿಕೇಯ ತಪೋವನಕ್ಕೆ ದತ್ತಿಯನ್ನು ಕೊಟ್ಟಿದ್ದರ ಬಗ್ಗೆ ಉಲ್ಲೇಖವಿದೆ. ಹೂವಿನ ಹಡಗಲಿ, ದಾವಣಗೆರೆಯನ್ನು ಒಳಗೊಂಡ ಕೋಗಳಿ ಪ್ರಾಂತ್ಯವು ಕೆಲ ಅವಧಿಗೆ ಗೆದ್ದಂತಹ ಸೇವುಣರ ರಾಜ್ಯದ ಭಾಗವಾಗಿಟ್ಟಿತು.

ಕಂಪಿಲಿ ಮತ್ತು ಹೊಯ್ಸಳ ರಾಜ್ಯಗಳ ಹಿನ್ನೆಲೆಯೊಂದಿಗೆ ಆರಂಭಕಾಣುವ ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೩೩೬ ರಲ್ಲಿ ಸ್ಥಾಪನೆಗೊಂಡಿತು. ಬಳ್ಳಾರಿಯ ಪ್ರಾಚೀನ ಧಾರ್ಮಿಕ ಕೇಂದ್ರವಾದ ಚಂಪಾಕ್ಷೇತ್ರ ಅಥವಾ ಪಂಪಾಕ್ಷೇತ್ರ(ಇಂದಿನ ಹಂಪಿ)ಯು ಇವರ ರಾಜಧಾನಿಯಾಗಿದ್ದಿತು. ಸಂಗಮ, ಸಾಳುವ, ತುಳುವ ರಾಜವಂಶಗಳು ಕ್ರಮವಾಗಿ ವಿಜಯನಗರ ಸಾಮ್ರಾಜ್ಯವನ್ನು ಸುಮಾರು ಎರಡು ಶತಮಾನಕ್ಕೂ ಹೆಚ್ಚು ಅವಧಿಗೆ ಮುನ್ನಡೆಸಿಕೊಂಡು ಬಂದರು. ಇವರೆಲ್ಲರ ಪರಿಶ್ರಮದ ಫಲವಾಗಿ ವಿಜಯನಗರ ಸಾಮ್ರಾಜ್ಯವು ಅತ್ಯಂತ ಹೆಚ್ಚಿನ ಭೂಪ್ರದೇಶಗಳನ್ನು ಹೊಂದುವಂತಾಯಿತು.[೬] ಸಂಗಮನ ಮಕ್ಕಳಾದ ಮೊದಲನೆ ಹರಿಹರ-ಬುಕ್ಕರಿಂದ ಸ್ಥಾಪಿತವಾದ ಸಾಮ್ರಾಜ್ಯವು ಸಂಗಮ ವಂಶವಾಗಿ ಗುರುತಿಸಿಕೊಂಡಿತು. ಈ ವಂಶಜರು ವಿಜಯನಗರ ರಾಜ್ಯದಲ್ಲಿ ಐಕ್ಯತೆ ತಂದು ರಾಜ್ಯಬಲವನ್ನು ವರ್ಧಿಸಿದರು. ಶ್ರೀ ವಿದ್ಯಾರಣ್ಯರು ಇವರ ಆದ್ಯ ಗುರುವಾಗಿದ್ದರು. ಸುಮಾರು ನೂರಾ ಐವತ್ತು ವರ್ಷಗಳ ನಂತರ ಸಂಗಮ ವಂಶವು ಅಂತ್ಯವಾಗಿ ಸಾಳುವ ನರಸಿಂಹನಿಂದ ಕ್ರಿ.ಶ. ೧೩೮೫ ರಲ್ಲಿ ಸಾಳುವ ವಂಶವು ಅಧಿಕಾರಕ್ಕೆ ಬಂದಿತು. ದುರ್ಬಲ ಅರಸರ ಕಾರಣ ಬಹುಕಾಲ ಆಳ್ವಿಕೆ ನಡೆಸುವಲ್ಲಿ ಈ ವಂಶವು

ವಿಫಲವಾಯಿತು. ಈ ದುರ್ಬಲತೆಯ ಉಪಯೋಗ ಪಡೆದ ತುಳುವ ನರಸನಾಯಕ ಕ್ರಿ.ಶ. ೧೪೯೨ ರಲ್ಲಿ ತುಳುವ ವಂಶವನ್ನು ವಿಜಯನಗರ ಸಾಮ್ರಾಜ್ಯದಲ್ಲಿ ಅಧಿಕಾರಕ್ಕೆ ತಂದನು. ಈ ವಂಶದ ಮೂರನೇ ಅರಸನಾಗಿ ೧೫೦೯ ರಲ್ಲಿ ಪಟ್ಟವೇರಿದ ಶ್ರೀ ಕೃಷ್ಣದೇವರಾಯನು ಇಡಿಯಾಗಿ ಈ ಸಾಮ್ರಾಜ್ಯದ ಆಳ್ವಿಕೆದಾರರಲ್ಲೇ ಪ್ರಖ್ಯಾತನಾಗಿದ್ದಾನೆ. ಅನೇಕ ರಾಜಕೀಯ ಸ್ಥಿತ್ಯಂತರಗಳ ಮಧ್ಯೆಯೂ ಕೃಷ್ಣದೇವರಾಯನು ಶಾಂತಿ-ಸೌಹಾರ್ದತೆ ಕಾಯುವಲ್ಲಿ ಸಫಲನಾದನು. ಯುರೋಪಿಯನ್ನರ ಆಗಮನವಾಗಿ ಗೋವಾದಲ್ಲಿ ಪೋರ್ಚುಗೀಸರು ನೆಲೆಯೂರಲು ಸಹಾಯ ಹಸ್ತ ನೀಡಿದನು. ಈ ರಾಜತಾಂತ್ರಿಕ ಸಂಬಂಧವನ್ನು ಸುಧಾರಿಸಲು ಕ್ರೈಸ್ತ ಪಾದ್ರಿಗಳನ್ನು ಕೃಷ್ಣದೇವರಾಯನ ಆಸ್ಥಾನಕ್ಕೆ ರಾಯಭಾರಿಗಳನ್ನಾಗಿ ಕಳುಹಿಸಲಾಯಿತು. ಇವರನ್ನು ಆದರದಿಂದ ಬರಮಾಡಿಕೊಂಡು ಸಾಮ್ರಾಜ್ಯದಲ್ಲಿ ಕ್ರೈಸ್ತರು ನೆಲೆಸಲು ಅನುಮತಿಸಿದನು.[೪]

ಕೃಷ್ಣದೇವರಾಯನಿಗೂ ಪೂರ್ವದಲ್ಲಿ ವಿಜಯನಗರ ಆಸ್ಥಾನದಲ್ಲಿ ನಿಮೆಹ್-ಪೆಜಿರ್ ಎಂಬ ಕ್ರೈಸ್ತ ಧರ್ಮೀಯನು ದಿವಾನನಾಗಿದ್ದನು ಎಂದು ಅಬೆದ್-ಬೆರ್ ರಜಾಕ್ ಎಂಬ ಪ್ರವಾಸಿಗನಿಂದ ತಿಳಿದುಬರುತ್ತದೆ. ಸಮಕಾಲೀನ ಪ್ರವಾಸಿಗರಾದ ಬರ್ಬೋಸ, ಡೊಮಿಂಗೋ ಪಯಸ್‌ರು ನೀಡಿರುವ ಲಿಖಿತ ಹೇಳಿಕೆಗಳಿಂದ ವಿಜಯನಗರ ಸೈನ್ಯದಲ್ಲಿ ಇದ್ದ ಒಂದು ಸಾವಿರ ಸೈನಿಕರು ಕ್ರೈಸ್ತ ಧರ್ಮೀಯರಾಗಿದ್ದರು. ಇವರೆಲ್ಲರ ಧರ್ಮಾಚರಣೆಗೆ ಅನುಕೂಲವಾಗಲೆಂದು ಚರ್ಚ್ ನಿರ್ಮಿಸಿಕೊಳ್ಳಲು ಅನುಮತಿಸಿದನು. ದಕ್ಷಿಣ ಭಾರತವನ್ನೆಲ್ಲಾ ಆಕ್ರಮಿಸಿದ್ದ ಕೃಷ್ಣದೇವರಾಯನ ಅವಧಿಯಲ್ಲಿ ಹೆಚ್ಚಿನ ಸಂಖ್ಯೆಯ ಕ್ರೈಸ್ತರು ಗೋವಾ ಮೂಲಕ ಕರ್ನಾಟಕದ ನಾನಾ ಕ್ರೈಸ್ತೇತರ ಭಾಗಗಳಿಗೆ ಹರಡಿದರು. ಕ್ರಿ.ಶ. ೧೫೨೯ ರಲ್ಲಿ ಕೃಷ್ಣದೇವರಾಯ ಕಾಲವಾಗಲಾಗಿ ಅಚ್ಯುತರಾಯನು ನಂತರ ಸದಾಶಿವರಾಯನು ಅಧಿಕಾರಕ್ಕೆ ಬಂದರು. ಸದಾಶಿವರಾಯನು ಹೆಸರಿಗೆ ಮಾತ್ರ ಅರಸನಾಗಿದ್ದನು. ರಾಜ್ಯದ ಆಡಳಿತ ಸೂತ್ರವು ಅಳಿಯ ರಾಮರಾಯನ ಕೈಯಲ್ಲಿದ್ದಿತು. ಉತ್ತರ ಕರ್ನಾಟಕದ ಮುಸ್ಲಿಂ ಆಳ್ವಿಕೆದಾರರಿಗೆ ಕಂಟಕನಾದ ರಾಮರಾಯನ ಮೇಲೆ ಐದು ರಾಜವಂಶಗಳಿಂದ ಕೂಡಿದ ಮುಸ್ಲಿಂ ಒಕ್ಕೂಟವು ದಾಳಿಮಾಡಿತು. ಇವರ ವಿರುದ್ಧ ಏಕಮಾತ್ರನಾಗಿ ಬಂದ ರಾಮರಾಯನ ಸೈನ್ಯವು ರಕ್ಕಸ ಮತ್ತು ತಂಗಡಿ ಗ್ರಾಮಗಳಲ್ಲಿ ಎದುರಾಗಿ ಸತತ ಒಂದು ತಿಂಗಳು ನಡೆದ (ಕ್ರಿ.ಶ. ೧೫೬೫) ಘೋರ ಯುದ್ಧದಲ್ಲಿ ರಾಮರಾಯನು ಯುದ್ಧಭೂಮಿಯಲ್ಲೇ ಕೊಲೆಯಾದನು. ಇದರೊಂದಿಗೆ ವಿಜಯನಗರ ಸಾಮ್ರಾಜ್ಯದ ತುಳುವ ವಂಶವು ಅಂತ್ಯವಾಗಿ ಹಂಪಿ ಪ್ರಾಂತ್ಯವೆಲ್ಲಾ ಲೂಟಿಗೆ ಒಳಗಾಯಿತು. ಅರವೀಡು ವಂಶವು ಪೆನುಗೊಂಡೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮುಂದುವರೆಸಿತು.

ವಿಜಯನಗರದ ಅವನತಿಯ ನಂತರ ಪೂರ್ವದ ಉನ್ನತ ಅಧಿಕಾರಿಗಳು ಬಿಜಾಪುರದ ಸುಲ್ತಾನರಿಗೆ ಸಾಮಂತರಾಗಿ ಬಳ್ಳಾರಿಯ ವಿವಿಧ ಕೋಟೆ ಪ್ರದೇಶಗಳಾದ ಬಳ್ಳಾರಿ, ಗುಡೆಕೋಟೆ, ಜರ್ಮಲಿ, ಸಂಡೂರುಗಳಲ್ಲಿ ವಿವಿಧ ಕುಲಗಳಿಗೆ ಸೇರಿದ ಪಾಳೆಗಾರರು ಅಧಿಕಾರಕ್ಕೆ ಬಂದರು. ಕುರುಬ ಜನಾಂಗಕ್ಕೆ ಸೇರಿದ ಬಾಲದ ಹನುಮಪ್ಪ ನಾಯಕನು ಬಳ್ಳಾರಿ ಕೋಟೆಯನ್ನು ವಶಪಡಿಸಿಕೊಂಡನು. ನಂತರದ ಕೆಲ ಅವಧಿ ಈ ಕೋಟೆಯು ಮರಾಠರ ಶಿವಾಜಿಯ ಮತ್ತು ಮೊಘಲರ ಔರಂಗಜೇಬನ ಸುಪರ್ದಿಗೆ ಒಳಪಟ್ಟಿತು. ಮೈಸೂರು ಹೈದರಾಲಿಯೂ ಈ ಪ್ರದೇಶದ ಮೇಲೆ ದಾಳಿ ನಡೆಸಿ ಕೋಟೆಯನ್ನು ವಶಪಡಿಸಿಕೊಂಡು ದುರಸ್ತಿಗೊಳಿಸಿದನು. ಮತ್ತೊಮ್ಮೆ ಗುತ್ತಿಯನ್ನು ಆಕ್ರಮಿಸಲು ಬಳ್ಳಾರಿ ಮೂಲಕ ದಾಳಿ ನಡೆಸಿದ್ದನು. ಇನ್ನುಳಿದೆಡೆ ಪಾಳೆಯಗಾರರಲ್ಲಿ ಹರಪನಹಳ್ಳಿ ಪಾಳೆಗಾರರು ಪ್ರಮುಖರು ಮತ್ತು ಪ್ರಬಲರು. ಶಿದ್ದೋಜಿರಾವ್ ಘೋರ್ಪಡೆಯವರಿಂದ ಸ್ಥಾಪನೆಯಾದ ಸಂಡೂರು ಪಾಳೆಗಾರಿಕೆಯು ಕ್ರಿ.ಶ. ೧೮೧೮ ರಲ್ಲಿ ಬ್ರಿಟಿಷರೊಂದಿಗೆ ಒಪ್ಪಂದ ಮಾಡಿಕೊಂಡು ಮದ್ರಾಸ್ ಸರ್ಕಾರದ ರಕ್ಷಣೆಯಲ್ಲಿ ೧೯೪೭ ರ ವರೆಗೆ ಘೋರ್ಪಡೆ ವಂಶ ಆಳ್ವಿಕೆ ನಡೆಸಿತು.

**ವಸಾಹತು ಕಾಲ**

ಕ್ರಿ.ಶ. ೧೭೯೯ ರ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪು ಸುಲ್ತಾನನು ಹತನಾದನು. ಮೈಸೂರನ್ನು ವಶಪಡಿಸಿಕೊಂಡ ಬ್ರಿಟಿಷ್ ನೇತೃತ್ವದ ಒಕ್ಕೂಟ ಪಡೆಯು ವಿಜಯದ ನಂತರ ಮೈಸೂರು ರಾಜ್ಯವನ್ನು ನಾಲ್ಕು ಭಾಗಗಳಾಗಿ ಹಂಚಿದರು. ಇದರಲ್ಲಿ ಬಳ್ಳಾರಿ ಭಾಗವನ್ನು ಪಕ್ಕದ ಹೈದರಾಬಾದ್ ನಿಜಾಮನ ಸಾಮ್ರಾಜ್ಯಕ್ಕೆ ಸೇರಿಸಲಾಯಿತು. ಈ ಮೊದಲಿನ ಸಹಾಯಕ ಸೈನ್ಯ ಪದ್ಧತಿಯ ನಿಯಮದ ಪ್ರಕಾರ ಹೈದರಾಬಾದ್ ನಿಜಾಮನು ಬ್ರಿಟಿಷರಿಗೆ ನೀಡಬೇಕಾಗಿದ್ದ ಮೊತ್ತವು ಅಪಾರವಾಗಿ ಬೆಳೆದಿತ್ತು. ಇದನ್ನು ನೀಡಲಾಗದ ನಿಜಾಮನು ತನ್ನ ಸಾಮ್ರಾಜ್ಯದ ದಕ್ಷಿಣ ಪ್ರದೇಶಗಳಾದ ಬಳ್ಳಾರಿ, (ಸಂಡೂರು ಹೊರತು) ಕಡಪ ಮತ್ತು ಕರ್ನೂಲಗಳನ್ನು ಬ್ರಿಟಿಷರಿಗೆ ಒಪ್ಪಿಸಲು(Cede) ನಿರ್ಧರಿಸಿದನು. ಕ್ರಿ.ಶ. ೧೮೦೦ ರ ಅಕ್ಟೋಬರ್ ೧೨ ರಂದು ಅಧಿಕೃತವಾಗಿ ಈ ಪ್ರದೇಶಗಳನ್ನು ಬ್ರಿಟಿಷರಿಗೆ ಒಪ್ಪಿಸಲಾಯಿತು.[೫] ಒಪ್ಪಿತ ಆ ಪ್ರದೇಶಗಳಲ್ಲಿ ಕಡಪ ಮತ್ತು ಬಳ್ಳಾರಿಯನ್ನು ಒಂದು ಆಡಳಿತ ಕೇಂದ್ರವಾಗಿಸಿ ಕಲೆಕ್ಟರ್ ಒಬ್ಬರನ್ನು ನೇಮಿಸಲಾಯಿತು. ೧೮೦೦ರಲ್ಲಿ ಪ್ರಥಮ ಕಲೆಕ್ಟರ್ ಆಗಿ ಬಂದವನು ಥಾಮಸ್ ಮನ್ರೊ. ಈತನ ಇಪ್ಪತ್ತು ವರ್ಷಗಳ ಆಳ್ವಿಕೆಯ ಅವಧಿಯಲ್ಲಿ ಬಳ್ಳಾರಿಯಲ್ಲಿದ್ದ ಅನಾನುಕೂಲಗಳನ್ನು ಉನ್ನತಾಧಿಕಾರಿಗಳಿಗೆ ಪತ್ರ ಬರೆದು, ಬಳ್ಳಾರಿ ಅಭಿವೃದ್ಧಿಗೆ ಯೋಜನೆ ರೂಪಿಸಿದನು. ಕ್ರಿ.ಶ. ೧೮೭೦ ರಲ್ಲಿ ಮನ್ರೊ ಅಧಿಕಾರ ಅಂತ್ಯದೊಂದಿಗೆ ಬಳ್ಳಾರಿಯನ್ನು ಕಡಪದಿಂದ ಪ್ರತ್ಯೇಕಿಸಿ ಎರಡು ಹೊಸ ಆಡಳಿತ ಕೇಂದ್ರಗಳನ್ನಾಗಿ ರೂಪಿಸಲಾಯಿತು.[೬]

ಬಳ್ಳಾರಿಯು ಮದ್ರಾಸ್ ಪ್ರೆಸಿಡೆನ್ಸಿಯ ತೆಕ್ಕೆಗೆ ಸೇರಿದ ನಂತರ ಅಭಿವೃದ್ಧಿಯ ಮೂಲಕ ಆಧುನಿಕತೆಯನ್ನು ಕಂಡಿತು. ದಂಡು ಪ್ರದೇಶವಾಗಿ ಸ್ವೀಕೃತವಾದ ಬಳ್ಳಾರಿಯನ್ನು ಬ್ರಿಟಿಷ್ ಸೈನಿಕರ ನೆಲೆವೀಡಾಯಿತು. ಇತಿಹಾಸದಲ್ಲಿ ಜೈನ, ಬೌದ್ಧ, ಶೈವ, ವೈಷ್ಣವರ ನೆಲೆಯಾಗಿದ್ದ ಬಳ್ಳಾರಿಯು ಕ್ರೈಸ್ತರ ನೆಲೆಯಾಗಲು ಮೊದಲಿಟ್ಟಿತು. ಬಹುಸಂಖ್ಯೆಯ ಬ್ರಿಟಿಷರು ಮತ್ತು ಇವರ ಸೇವಕರಾಗಿ ಬಂದ ತಮಿಳರು ಕ್ರೈಸ್ತಧರ್ಮೀಯರಾಗಿದ್ದರು. ಇವರುಗಳ ಆಧ್ಯಾತ್ಮಿಕ ಸೇವೆಗಾಗಿ ಈಗಾಗಲೆ, ಮದ್ರಾಸಿನಲ್ಲಿ ನೆಲೆಯೂರಿದ್ದ ವಿದೇಶಿ ಮಿಷನ್‌ಗಳು ತಮ್ಮ ಮಿಷನರಿಗಳನ್ನು ಬಳ್ಳಾರಿಗೆ ಕಳುಹಿಸಿಕೊಟ್ಟರು. ಮಿಷನರಿಗಳ ಆಗಮನದಿಂದ ಸ್ಥಳೀಯರಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಪ್ರಜ್ಞೆ ಮೂಡಿತು. ವಿಶೇಷವಾಗಿ ಕೆಳವರ್ಗಗಳು ತಮ್ಮ ಮೇಲಾಗಿರುವ ದೌರ್ಜನ್ಯಗಳಿಂದ ಹೊರಬರಲು ಸಹಕಾರಿಯಾಯಿತು. ವಿವಿಧ ಸೇವೆಗಳ ಮೂಲಕ ಮಿಷನರಿಗಳು ತೋರಿದ ಅಕ್ಕರೆಗೆ ಮರುಳಾದ ಈ ವರ್ಗದ ಜನತೆ ಗುಂಪು ಗುಂಪಾಗಿ ಗ್ರಾಮಮಟ್ಟದಲ್ಲಿ ಮತಾಂತರಗೊಂಡರು. ಶಿಕ್ಷಣ, ವೈದ್ಯಕೀಯ ಇನ್ನಿತರ ಸಮಾಜ ಸೇವಾಕೇಂದ್ರಗಳು ತೆರೆದು ಸ್ಥಳೀಯರ ಮೆಚ್ಚುಗೆಗೆ ಪಾತ್ರರಾದರು. ಮಿಷನರಿಗಳ ಕಾರ್ಯ ಚಟುವಟಿಕೆಗಳಿಗೆ ಬ್ರಿಟಿಷ್ ಅಧಿಕಾರಿಗಳ ಪೂರ್ಣ ಸಹಮತವಿದ್ದಿತು. ಬಳ್ಳಾರಿಯ ಆರಂಭದ ಮಿಷನರಿಗಳು ಮುದ್ರಣ, ಸಾಹಿತ್ಯ ಕಾರ್ಯಗಳಲ್ಲಿ ತೊಡಗಿಸಿಕೊಂಡು ಬಳ್ಳಾರಿಯನ್ನು ವಸಾಹತು ಅವಧಿಯ ಕರ್ನಾಟಕದ ಮಧ್ಯಭಾಗದ ಪ್ರಮುಖ ಕೇಂದ್ರವಾಗಿಸಿದರು. ಬ್ರಿಟಿಷ್ ಆಡಳಿತ ವ್ಯವಸ್ಥೆಗೆ ಒಳಪಟ್ಟು, ಕಾಲಕಾಲಕ್ಕೆ ಮದ್ರಾಸ್ ಸರ್ಕಾರ ಹೊರಡಿಸುತ್ತಿದ್ದ ಕಾಯ್ದೆಗಳನ್ನು ಕಲೆಕ್ಟರ್ ನೇತೃತ್ವದ ಆಡಳಿತ ವ್ಯವಸ್ಥೆಯು ಜಿಲ್ಲೆಗಳಲ್ಲಿ ಜಾರಿಗೊಳಿಸುತ್ತಿತ್ತು.

ಕಲೆಕ್ಟರ್ ಎಂಬ ಅಧಿಕಾರಿಯು ಸಾಮಾನ್ಯವಾಗಿ ಜಿಲ್ಲಾ ಆಡಳಿತದ ಮುಖ್ಯಸ್ಥನಾಗಿರುತ್ತಿದ್ದನು. ಶಿರಸ್ತೆದಾರ್ ಎಂಬುವನು ಜಿಲ್ಲೆಯ ಲೆಕ್ಕಪತ್ರಗಳು ಮತ್ತು ದಾಖಲೆಗಳನ್ನು ನಿರ್ವಹಿಸುವುದು ಮತ್ತು ಇತನು ಕಲೆಕ್ಟರ್ ಕಛೇರಿಯ ಮುಖ್ಯಾಧಿಕಾರಿಯಾಗಿರುತ್ತಿದ್ದನು. ಶಿರಸ್ತೆದಾರ್‌ನ ಅಧೀನದಲ್ಲಿ ಡೆಪ್ಯುಟಿ ಶಿರಸ್ತೆದಾರ್ ಎಂಬ ಸ್ಥಾನವು ಇದ್ದಿತು. ಈ ಅಧಿಕಾರಿ ಉಪವಿಭಾಗಗಳ ಉಸ್ತುವಾರಿಕನಾಗಿದ್ದನು. ನಗದು ಸಂಗ್ರಹಕಾರ ಎಂದು ಕರೆಯಲ್ಪಡುತ್ತಿದ್ದ ಅಧಿಕಾರಿಯು ಖಜಾನೆ ಮತ್ತು ಖಜಾನೆ ದಾಖಲೆಗಳ ಸಂಗ್ರಹಣದ ಮುಖ್ಯಾಧಿಕಾರಿ. ಅನ್ಯ ಭಾಷೆಯಲ್ಲಿರುವ ಎಲ್ಲಾ ಮೂಲ ದಾಖಲುಗಳನ್ನು ಇಂಗ್ಲೀಷಿಗೆ ಭಾಷಾಂತರಿಸಿ, ಸಂಗ್ರಹಿಸಿಡುವ ಇಂಗ್ಲಿಷ್ ರೈಟರ್ ಎಂಬ ಹುದ್ದೆಯು

ಜಾರಿಯಲ್ಲಿತ್ತು. ಇನ್ನುಳಿದಂತೆ ಶ್ರಾಫ್ ಎಂಬ ಅಧಿಕಾರಿಯು ಹಣ ಪಡೆಯುವ ಮತ್ತು ಹಿಂದಿರುಗಿಸುವ ಬ್ಯಾಂಕಿನ ರೀತಿ ಕಾರ್ಯವನ್ನು ನಿರ್ವಹಿಸುತ್ತಿದ್ದನು.

ತಾಲ್ಲೂಕಿನ ಮುಖ್ಯ ಕಂದಾಯ ಅಧಿಕಾರಿಯನ್ನು ತಹಶ್ಚೀಲ್ದಾರ್ ಎನ್ನುತ್ತಿದ್ದರು. ಈತನ ಅಧೀನದಲ್ಲಿ ಡೆಪ್ಯುಟಿ ತಹಶ್ಚೀಲ್ದಾರ್ ಎಂಬ ಅಧಿಕಾರಿಯು ಇರುತ್ತಿದ್ದನು. ಇವರ ಅಧೀನದ ಆಡಳಿತ ಯಂತ್ರ ಈ ಕೆಳಗಿನಂತಿತ್ತು.

| | |
|---|---|
| ೧. ಶ್ಯಾನುಭಾಗ್ ಅಥವಾ ಕರ್ನನ್ | ಗ್ರಾಮ ಲೆಕ್ಕಿಗ |
| ೨. ನೀರ್ಗಂಟಿ | ನೀರು ಸರಬರಾಜು ಅಧಿಕಾರಿ |
| ೩. ವೆಟ್ಟಿ | ಗ್ರಾಮ ಸೇವಕ (ಪ್ಯೂನ್) |
| ೪. ತಳವಾರಿ | ಗ್ರಾಮ ಪೋಲೀಸ್ ಅಧಿಕಾರಿ |

ಎರಡು ಶತಮಾನಗಳ ಕಾಲ ಭಾರತವನ್ನು ಆಳಿದ ಬ್ರಿಟಿಷರ ಪ್ರಭಾವದಿಂದಾಗಿ ಇಂದಿಗೂ ಭಾರತದಲ್ಲಿ ಇದೇ ಶ್ರೇಣಿರೂಪದ ಆಡಳಿತ ವ್ಯವಸ್ಥೆ ಜಾರಿಯಲ್ಲಿದೆ.

ಅತಿ ಬಿಸಿಲು ಮತ್ತು ಬಹುತೇಕ ಕಪ್ಪುಮಣ್ಣಿನಿಂದ ಕೂಡಿದ ಬಳ್ಳಾರಿಯಲ್ಲಿ ಶೇ ೨೩ ರಷ್ಟು ಕೃಷಿಯೋಗ್ಯ ಭೂಮಿಯಾಗಿತ್ತು. ಇಂತಹ ಭೂಮಿಯಲ್ಲಿ ಹತ್ತಿ ಬೆಳೆ ಬೆಳೆಯುವುದು ಸೂಕ್ತವಿದ್ದಿತು. ಅತಿ ಹೆಚ್ಚಾಗಿ ಹತ್ತಿಯನ್ನು ಇನ್ನುಳಿದಂತೆ ಎಣ್ಣೆಕಾಳುಗಳನ್ನು, ಕಬ್ಬು, ಧವಸ ಧಾನ್ಯಗಳನ್ನು ಬೆಳೆಯುತ್ತಿದ್ದರು. ಹತ್ತಿಯು ಮುಖ್ಯ ಬೆಳೆಯಾಗಿದ್ದು, ಮದ್ರಾಸ್, ಬೊಂಬಾಯಿಗಳಿಗೆ ರಫ್ತಾಗುತ್ತಿತ್ತು. ಕಚ್ಚಾವಸ್ತು ದೊರೆಯುವ ಮೂಲ ಪ್ರದೇಶದಲ್ಲಿ ಹತ್ತಿ ಕಾರ್ಖಾನೆ ಸ್ಥಾಪಿಸುವುದು ಸೂಕ್ತವೆಂದು ತಿಳಿದ ಉದ್ಯಮಿಗಳು ಬಳ್ಳಾರಿಯಲ್ಲಿ ಹತ್ತಿ ಹದಮಾಡುವ ಕಾರ್ಖಾನೆಗಳನ್ನು ಆರಂಭಿಸಿದರು. ಇದಕ್ಕೆ ಪ್ರೋತ್ಸಾಹ ಕಾರಣ ಹಲವಾರು ಉದ್ಯಮಿಗಳು ಬಳ್ಳಾರಿಯಲ್ಲಿ ಕಾರ್ಖಾನೆ ತೆರೆಯಲು ಉತ್ಸುಕರಾದರು. ೧೮೮೩ ರ ಹೊತ್ತಿಗೆ ಏಳು ಹತ್ತಿ ಹದವಮಾಡುವ ಕಾರ್ಖಾನೆಗಳು ಕಾರ್ಯನಿರ್ವಹಿಸುತ್ತಿದ್ದು ಸುಮಾರು ೨೦೦ ಮಂದಿ ಕೆಲಸ ಮಾಡುತ್ತಿದ್ದರು. ಮತ್ತು ಇದೇ ವರ್ಷ ಆರಂಭ ಕಂಡ 'ಬಳ್ಳಾರಿ ಸ್ಪಿನ್ನಿಂಗ್ ಅಂಡ್ ವೇವಿಂಗ್ ಮಿಲ್' ಹತ್ತಿಯಿಂದ ದಾರದ ಎಳೆಯನ್ನು ಉತ್ಪಾದಿಸುವ ಕಾರ್ಖಾನೆಯಾಗಿತ್ತು. ಈ ಕಾರ್ಖಾನೆಯಲ್ಲಿ ಸುಮಾರು ೪೯೦ ಜನ ಕೆಲಸ ಮಾಡುತ್ತಿದ್ದರು.[೭] ಬಳ್ಳಾರಿಯ ಅಲ್ಲೀಪುರ ಬಳಿಯ ಈ ಕಾರ್ಖಾನೆಯಿಂದಾಗಿ ಈ ಭಾಗವನ್ನು ಈಗಲೂ ದಾರದ ಮಿಲ್ ಪ್ರದೇಶ ಎಂದು ಜನ ಕರೆಯುತ್ತಾರೆ.

ಯಥೇಚ್ಛ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರಿನ ಸ್ಥಳವಾಗಿರುವ ಬಳ್ಳಾರಿಯ ಹೊಸಪೇಟೆ ಬಳಿಯಲ್ಲಿರುವ ನಾರ್ಮೇಹಟ್ಟಿಯಲ್ಲಿ ಕಬ್ಬಿಣದ ಅದಿರನ್ನು ಕರಗಿಸಿ ಲೋಹ ತಯಾರಿಸುವ ಕಾರ್ಖಾನೆ ಇದ್ದಿತು. ನಂತರ ಸಂಡೂರಿನಲ್ಲಿ ಮೆಸ್ಸರ್ಸ್ ಸಂಡೂರು ಮ್ಯಾಂಗನೀಸ್ ಅಂಡ್ ಐರನ್ ಓರ್ ಲಿಮಿಟೆಡ್ ಕಂಪೆನಿಯು ಕಾರ್ಯನಿರ್ವಹಿಸುತ್ತಿತ್ತು.

ವ್ಯಾಪಾರಕ್ಕೆ ಸಂಬಂಧಿಸಿದಂತೆಯೂ ಬಳ್ಳಾರಿಯು ಮದ್ರಾಸ್, ಮೈಸೂರು, ಮಂಗಳೂರು, ಬೊಂಬಾಯಿಗಳ ಮಧ್ಯದ ವಿನಿಮಯ ಮಾರುಕಟ್ಟೆಯಾಗಿದ್ದಿತು. ಬಳ್ಳಾರಿಯು ಉತ್ಪಾದಿಸುತ್ತಿದ್ದ ಜೋರಿ ಎಂಬ ಉತ್ತಮ ದರ್ಜೆಯ ಬಟ್ಟೆಗೆ ಬಹಳ ಬೇಡಿಕೆಯಿದ್ದಿತು. ಅಲ್ಲದೆ ಮೈಸೂರಿನಲ್ಲಿ ತಯಾರಾಗುತ್ತಿದ್ದ ರೇಶ್ಮೆ ಬಟ್ಟೆಗಳಿಗೆ ಬಳ್ಳಾರಿಯೇ ಉತ್ತಮ ಕೇಂದ್ರವಾಗಿದ್ದಿತು. ಬಳ್ಳಾರಿಯು ಇತರ ಪಟ್ಟಣಗಳೊಂದಿಗೆ ರಸ್ತೆ ಮತ್ತು ರೈಲು ಸಂಪರ್ಕಗಳನ್ನು ಹೊಂದಿತ್ತು.

ಕ್ರಿ.ಶ. ೧೮೩೧ ರಲ್ಲಿ ಮೈಸೂರು ಸಂಪರ್ಕಿಸಲು ಹೊಂದಿದ್ದ ಮೂರು ದೊಡ್ಡದಾದ ರಸ್ತೆಗಳಲ್ಲಿ, ಮದ್ರಾಸ್, ಮಂಗಳೂರುಗಳಿಗೆ ಎರಡು ರಸ್ತೆಗಳಾದರೆ, ಉಳಿದ ಮೂರನೆ ರಸ್ತೆಯು ಶಿರಾ ಮಾರ್ಗವಾಗಿ ನೇರ ಬಳ್ಳಾರಿಯನ್ನು ಸಂಪರ್ಕಿಸುತ್ತಿತ್ತು.[೮] ಕಮಿಷನರ್‌ಗಳ ಅವಧಿಯಲ್ಲಿ ಈ ರಸ್ತೆಯು ಸುಧಾರಿಸಿತು. ಬಳ್ಳಾರಿ ಮತ್ತು ಮೈಸೂರು

ಮಧ್ಯದ ಉತ್ತಮ ವ್ಯಾಪಾರ ಸಂಬಂಧಕ್ಕೆ ಇದು ಅನುಕೂಲ ಕಲ್ಪಿಸಿತ್ತು. ಅಲ್ಲದೆ ಮದ್ರಾಸ್-ಬೊಂಬಾಯಿಗಳ ಮಧ್ಯದ ರಸ್ತೆಯೂ ಬಳ್ಳಾರಿ ಮೂಲಕ ಹಾದುಹೋಗುತ್ತಿತ್ತು. ಜಿಲ್ಲೆಯೊಳಗಣ ರಸ್ತೆಗಳಂತೂ ಅಸ್ತವ್ಯಸ್ಥೆತೆಯಿಂದ ಕೂಡಿದ್ದವು.

ಬಾಂಬೆ ಪ್ರೆಸಿಡೆನ್ಸಿಯಲ್ಲಿ ೧೮೫೩ ರಲ್ಲಿ ಭಾರತದಲ್ಲಿ ಪ್ರಥಮ ರೈಲು ಸಂಚರಿಸಿತು. ಕರ್ನಾಟಕದಲ್ಲಿ ಈ ರೀತಿಯ ಕಾರ್ಯ ಕೈಗೂಡಿದ್ದು ೧೮೫೯ ರಲ್ಲಿ. ಇನ್ನುಳಿದಂತೆ ಕರ್ನಾಟಕದಲ್ಲಿ ರೈಲ್ವೆ ಕಾರ್ಯ ಜಾರಿಯಾದದ್ದು ಬಳ್ಳಾರಿಯಲ್ಲಿ. ಗುಂತಕಲ್ ಮೂಲಕ ಮದ್ರಾಸಿಗೆ ಹಾದುಹೋಗುತ್ತಿದ್ದ ರೈಲು ಹಳಿಗೆ ೧೮೭೧ ರಲ್ಲಿ ಬಳ್ಳಾರಿಯವರೆಗೆ ಹಾಕಲಾದ ಹಳಿಯನ್ನು ಜೋಡಿಸಿ, ಬಳ್ಳಾರಿ-ಮದ್ರಾಸ್ ಮಧ್ಯದ ಸುಮಾರು ೪೯೦ ಕಿ.ಮೀ. ಸಂಚಾರಕ್ಕೆ ಅನುವುಮಾಡಲಾಯಿತು. ಇಷ್ಟೆ ಅಲ್ಲದೆ ರೈಲು ಹಳಿ ನಿರ್ಮಾಣ ಕಾರ್ಯ ಬಳ್ಳಾರಿಯಲ್ಲಿ ಮುಂದುವರೆದು ೧೮೮೪ ರಲ್ಲಿ ಬಳ್ಳಾರಿ-ಹೊಸಪೇಟೆ ಮಧ್ಯೆ, ೧೮೮೭ ರಲ್ಲಿ ಗುಂಡಾ ರೋಡ್ ಜಂಕ್ಷನ್-ಸಾಮೆಹಳ್ಳಿ ಮಧ್ಯೆ ರೈಲು ಸಂಪರ್ಕ ಏರ್ಪಟ್ಟಿತು. ೧೯೦೫ ರಲ್ಲಿ ಸುಮಾರು ೧೨೩ ಕಿ.ಮೀ. ಉದ್ದ ರೈಲು ಹಳಿ ಹಾಕಿ ಬಳ್ಳಾರಿ-ರಾಯದುರ್ಗ ಮಧ್ಯೆ (೫೪ ಕಿ.ಮೀ.), ಹೊಸಪೇಟೆ-ಕೊಟ್ಟೂರು ಮಧ್ಯೆ (೬೯ ಕಿ.ಮೀ.) ರೈಲು ಸಂಚರಿಸಲು ಆರಂಭಿಸಿದರು. ರೈಲು ಹಳಿ ನಿರ್ಮಾಣಕ್ಕೆ ಹಾಸಲಾಗುತ್ತಿದ್ದ ಸ್ಲೀಪರ್‌ಗಳನ್ನು ವಿದೇಶದಿಂದ ಹಡಗುಗಳಲ್ಲಿ ತರಿಸುತ್ತಿದ್ದ ಪೈನ್ ಮರದ ದಿಂಬುಗಳಾಗಿದ್ದವು. ಈ ಎಲ್ಲಾ ರೈಲು ಸಂಪರ್ಕಗಳು ಸ್ಥಳೀಯರ ಅನುಕೂಲಕ್ಕಿಂತ, ಸ್ಥಳೀಯ ಸಂಪತ್ತಿನ ಸರಬರಾಜಿಗೆ ಅನುಕೂಲವಾಗಿತ್ತು. ಮೊದಲನೇ ಮಹಾಯುದ್ಧದ ನಂತರ ಬಳ್ಳಾರಿಯಲ್ಲಿ ಬ್ರಿಟಿಷರ ಸಂಖ್ಯೆ ಕ್ರಮೇಣ ಕಡಿಮೆಯಾಯಿತು. ಅಲ್ಲದೆ ಸ್ವಾತಂತ್ರ್ಯ ಹೋರಾಟದ ಕಾವು ಹೆಚ್ಚಾಗತೊಡಗಿತು.

## ಸ್ವಾತಂತ್ರ್ಯ ಹೋರಾಟ

ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಅವಧಿಯಲ್ಲಿ ಬ್ರಿಟಿಷರ ವಿರುದ್ಧ ನಡೆದ ಸಶಸ್ತ್ರ ಹೋರಾಟದಲ್ಲಿ ಬಳ್ಳಾರಿಯೂ ಪಾತ್ರವಹಿಸಿದ್ದಿತು. ಬಳ್ಳಾರಿ ಮತ್ತು ಹರಪನಹಳ್ಳಿ ತಾಲ್ಲೂಕುಗಳಲ್ಲಿ ತಹಶ್ಶೀಲ್ದಾರರಾಗಿ ಕೆಲಸ ಮಾಡಿದ್ದ ಮುಂಡರಗಿ ಭೀಮರಾವ್‌ರು ತಹಶ್ಶೀಲ್ದಾರ್ ಹುದ್ದೆಗೆ ನಿವೃತ್ತಿ ಘೋಷಿಸಿದರು. ನಂತರ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡು ಸುಮಾರು ೧೫೦ ಯುವಕರನ್ನು ಬ್ರಿಟಿಷರ ವಿರುದ್ಧ ಹೋರಾಡಲು ಸಂಘಟಿಸಿದರು. ಈ ಯುವಕರಲ್ಲಿ ಅನೇಕರು ಕೊಪ್ಪಳ ಕೋಟೆಯನ್ನು ವಶಪಡಿಸಿಕೊಂಡು ಬ್ರಿಟಿಷರ ವಿರುದ್ಧದ ಯುದ್ಧದಲ್ಲಿ ಮಡಿದರು. ೧೯೪೭ ರ ಆಗಸ್ಟ್ ೧೫ ಕ್ಕೆ ಭಾರತವು ಸ್ವತಂತ್ರಗೊಳ್ಳುವ ಮೂಲಕ ಬಳ್ಳಾರಿಯು ಬ್ರಿಟಿಷರ ಆಳ್ವಿಕೆಯಿಂದ ಮುಕ್ತವಾಯಿತು.

ಬ್ರಿಟಿಷರ ಬೀಡಾಗಿದ್ದ ಬಳ್ಳಾರಿಯು ಸ್ವಾತಂತ್ರ್ಯ ಹೋರಾಟದಲ್ಲಿಯೂ ಸಕ್ರಿಯವಾಗಿ ತೊಡಗಿತ್ತು. ೧೮೮೫ ರಲ್ಲಿ ಬಾಂಬೆಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್‌ನ ಅಧಿವೇಶನದಲ್ಲಿ ಭಾಗವಹಿಸಿದ ಕರ್ನಾಟಕದ ಏಕಮಾತ್ರ ವ್ಯಕ್ತಿಯಾದ ಮೈಲಾರ ಮಹದೇವಪ್ಪನವರು ಬಳ್ಳಾರಿಯವರು ಎಂಬುದು ಹೆಮ್ಮೆಯ ವಿಷಯ. ೧೯೦೫ ರಲ್ಲಿ ಬಾಲಗಂಗಾಧರ ತಿಲಕ್‌ರವರು ಬಳ್ಳಾರಿಗೆ ಭೇಟಿ ನೀಡಿ ಕ್ರಾಂತಿಕಾರಿಗಳಾಗುವಂತೆ ಕರೆನೀಡಿದರು. ೧೯೩೧ ಮತ್ತು ೧೯೩೪ ರಲ್ಲಿ ಗಾಂಧೀಜಿಯವರು ಬಳ್ಳಾರಿಗೆ ಭೇಟಿ ನೀಡಿ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕುವಂತೆ ಬಹಿರಂಗ ಅಧಿವೇಶನದಲ್ಲಿ ಕರೆನೀಡಿದರು. ಎರಡನೆ ಬಾರಿಗೆ ಬಂದಾಗ ಬಳ್ಳಾರಿ ಜಿಲ್ಲೆಯಾದ್ಯಂತ ಸಂಚರಿಸಿ ರಚನಾತ್ಮಕ ಚಟುವಟಿಕೆಗಳಿಗೆ ಚಾಲನೆ ನೀಡಿದರು. ಗಂಗಾಧರ್ ರಾವ್ ದೇಶಪಾಂಡೆ, ವಿ.ವಿ. ಪಾಟೀಲ್‌ರು ಗಾಂಧಿ ಪ್ರವಾಸದಲ್ಲಿ ಜೊತೆಯಾಗಿದ್ದರು. ಈ ಸಂದರ್ಭದ ಸ್ಥಳೀಯ ಸ್ವಾತಂತ್ರ ಹೋರಾಟಗಾರರೆಂದರೆ ಬಾದನಹಟ್ಟಿ ವೆಂಕೋಬರಾವ್, ಇಜಾರಿ ವಸುಪಾಲಪ್ಪ, ಬೆಲ್ಲದ ಚೆನ್ನಪ್ಪ, ಗುರುನಾಥ ಶೆಟ್ಟರು, ಅನಂತಾಚಾರ್, ಡಾ. ಆರ್. ನಾಗನಗೌಡ, ಅಲ್ಲಂ ಕರಿಬಸಪ್ಪ ಮುಂತಾದವರು. ಇವರಲ್ಲಿ ಅನೇಕರು ೧೯೪೦ ರ ಸತ್ಯಾಗ್ರಹ ಹೋರಾಟದಲ್ಲಿ ಪಾಲ್ಗೊಂಡು ಸೆರೆಮನೆ ಸೇರಿದರು.

### ಏಕೀಕರಣ ಹೋರಾಟ

ಭಾಷಾವಾರು ರಾಜ್ಯ ರಚನೆಗಾಗಿ ಆಂಧ್ರದಲ್ಲಿ ಹೋರಾಟಗಳು ತೀವ್ರವಾಗಿ, ಕೇಂದ್ರ ಸರಕಾರವು ಆಂಧ್ರ ತೆಲುಗು ರಾಜ್ಯ ರಚನೆಗೆ ೧೯೫೩ ರಲ್ಲಿ ಸಮ್ಮತಿಸಿತು. ಮದ್ರಾಸ್ ಬ್ರಿಟಿಷರ ನಿಯಂತ್ರಣದಲ್ಲಿದ್ದ ಮತ್ತು ಬಹುಸಂಖ್ಯೆಯ ಕನ್ನಡ-ತೆಲುಗು ಭಾಷಿಕರಿಂದ ಕೂಡಿದ್ದ ಬಳ್ಳಾರಿಯನ್ನು ಆಂಧ್ರಕ್ಕೆ ಎಷ್ಟು ಪ್ರಮಾಣದಲ್ಲಿ ಹೇಗೆ ಸೇರಿಸಬಹುದೆಂದು ವಾಂಛೂ ಸಮಿತಿಯನ್ನು ರಚಿಸಲಾಯಿತು. ಆ ಸಮಿತಿಯ ವರದಿಯಂತೆ ಬಳ್ಳಾರಿಯ ಬಹುಭಾಗವು ಆಂಧ್ರರಾಜ್ಯದಿಂದ ಹೊರ ಉಳಿಯಿತು. ಈ ನಂತರ ಕರ್ನಾಟಕದಲ್ಲಿಯೂ ಕನ್ನಡ ರಾಜ್ಯ ನಿರ್ಮಾಣವಾಗಬೇಕೆಂದು ಏಕೀಕರಣ ಹೋರಾಟವನ್ನು ತೀವ್ರಗೊಳಿಸಿದರು. ಇದರಲ್ಲಿ ಬಳ್ಳಾರಿ ಹೋರಾಟಗಾರರ ಪಾತ್ರ ಅವಿಸ್ಮರಣೀಯ. ಕೊ. ಚನ್ನಬಸಪ್ಪ, ವೈ. ಮಹಾಬಲೇಶ್ವರ ಶಾಸ್ತ್ರಿಗಳು, ಕಡ್ಡಿಪುಡಿ ವೀರಭದ್ರಪ್ಪ, ಸದಾಶಿವರೆಡ್ಡಿ, ಪಿಂಜಾರ್ ರಂಜಾನ್ ಸಾಬ್ ಮುಂತಾದ ೩೭ ಕ್ಕೂ ಹೆಚ್ಚಿನ ಹೋರಾಟಗಾರರು ಬಳ್ಳಾರಿಗರಾಗಿದ್ದರು. ೩೦, ಸೆಪ್ಟೆಂಬರ್ ೧೯೫೩ ರಲ್ಲಿ ರಂಜಾನ್‌ಸಾಬ್‌ರವರು ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿ ಮಡಿದ ಮೊದಲ ಹುತಾತ್ಮರು. ಇವರ ಸಾವು ಏಕೀಕರಣಕ್ಕೆ, ಹೋರಾಟಕ್ಕೆ ಹೊಸ ತಿರುವನ್ನು ನೀಡಿತು. ೧೯೫೬ ನವೆಂಬರ್ ೦೧ ರಂದು ಬಳ್ಳಾರಿ ಜಿಲ್ಲೆಯು ಮೈಸೂರು ರಾಜ್ಯಕ್ಕೆ ಸೇರಿ (ಅಕ್ಟೋಬರ್ ೦೧) ಕರ್ನಾಟಕ ಏಕೀಕರಣ ಪೂರ್ಣಗೊಂಡಿತು. ಆಗ ಬಳ್ಳಾರಿಯು ಬಳ್ಳಾರಿ, ಸಿರುಗುಪ್ಪ, ಸಂಡೂರು, ಹೊಸಪೇಟೆ, ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ, ಮಲ್ಲಾಪುರ (ಹಗರಿ ಬೊಮ್ಮನ ಹಳ್ಳಿ ನಂತರದಲ್ಲಿ) ಒಟ್ಟು ಎಂಟು ತಾಲ್ಲೂಕುಗಳಿಂದ ಕೂಡಿತ್ತು.[೯]

ಏಕೀಕರಣ ಸಂದರ್ಭದ ಬಳ್ಳಾರಿಗೂ, ಸುವರ್ಣ ಕರ್ನಾಟಕದ ಬಳ್ಳಾರಿಗೂ ಮಧ್ಯೆ ಹಲವಾರು ವ್ಯತ್ಯಾಸಗಳಿವೆ. ಇಂದು ಬಳ್ಳಾರಿಯು ೮೪೧೧ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದ್ದು, ೨೦೦೧ ರ ಜನಗಣತಿ ಪ್ರಕಾರ ೨೦,೨೭,೧೪೦ ಜನಸಂಖ್ಯೆ ಇದ್ದು, ಈ ಜನಸಂಖ್ಯೆ ಬೆಳವಣಿಗೆ ಶೇ. ೨೨.೧ ರಷ್ಟು ಹೊಂದಿದೆ.[೧೦] ಕರ್ನಾಟಕದಲ್ಲಿ ಇಂದು ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಹೈದರಾಬಾದ್ ಕರ್ನಾಟಕ ಎಂಬ ಭಾಗಗಳಿದ್ದು, ಬಳ್ಳಾರಿಯನ್ನು ಬೇಕೆಂದಾಗ ಎಲ್ಲಾ ಭಾಗಗಳಿಗೂ ಸೇರಿಸುವ, ಬೇಡವೆಂದಾಗ ಯಾವೊಂದು ಭಾಗಕ್ಕೂ ಸೇರಿಸದೆ ಇರುವ ಸನ್ನಿವೇಶ ಕಂಡುಬರುತ್ತದೆ.

### ೨.೨ ಮಿಷನ್-ಮಿಷನರಿಗಳ ಚಾರಿತ್ರಿಕ ಹಿನ್ನೆಲೆ

ಮಿಷನ್ (Mission) ಎಂಬುದು ಲ್ಯಾಟಿನ್ ಭಾಷೆಯ Mitto ಧಾತುವಿನಿಂದ ಸೃಜಿಸಿದ ಆಂಗ್ಲಪದವಾಗಿದೆ. Mitto ಧಾತುವಿನ ಆಂಗ್ಲ ಅರ್ಥ I send ಎಂದಾಗುತ್ತದೆ.[೧೧] ಇಂಗ್ಲಿಷ್-ಕನ್ನಡ ನಿಘಂಟುಗಳಲ್ಲಿ ಧರ್ಮಪ್ರಚಾರಕ ಮಂಡಳಿ, ಧರ್ಮ ಪ್ರಚಾರ ಕಾರ್ಯ, ಎಂದು ಅರ್ಥೈಸಲಾಗಿದೆ. ಕ್ರೈಸ್ತ ಧರ್ಮಕ್ಕೂ ಪೂರ್ವದ ಬೌದ್ಧ ಧರ್ಮವೂ ಸಹ ತನ್ನ ಧರ್ಮ ಪ್ರಸಾರ ಕಾರ್ಯವನ್ನು ಸಂಘಗಳ ಮೂಲಕ ಕೈಗೊಂಡಿದ್ದಿತು. ಹಾಗಾಗಿ ಈ ಕಾರ್ಯಕರ್ತರನ್ನು ಬುದ್ದಿಸ್ಟ್ ಮಿಷನ್ ಎಂದು ಕರೆಯಲಾಗಿದೆ. ಕ್ರೈಸ್ತರ ನಂತರದ ಇಸ್ಲಾಂ ಧರ್ಮ ಪ್ರಸಾಗ ಕೇಂದ್ರಗಳನ್ನು ಮಿಷನ್ ಎಂದೇ ಕರೆಯುವರು. ಕ್ರೈಸ್ತ ಮಿಷನ್ ಕಾರ್ಯಗಳ ಬಗ್ಗೆ ಅಧ್ಯಯನ ನಡೆಸಿರುವ ಪ್ರೊ. ಜಿ. ವೈಂಕಟಸುಬ್ಬಯ್ಯ, ಎಡ್ವರ್ಡ್ ನೋರೋ ಮತ್ತು ಶ್ರೀನಿವಾಸ ಹಾವನೂರರು ಮಿಷನ್ ಪದ ಕುರಿತಂತೆ ನೀಡಿರುವ ವ್ಯಾಖ್ಯೆಗಳು ಕ್ರಮವಾಗಿ ಈ ಕೆಳಗಿನಂತಿವೆ.

''ಕ್ರಿಶ್ಚಿಯನ್ ಚರ್ಚುಗಳು ಬೇರೆ ಬೇರೆ ದೇಶಗಳಿಗೆ ಬೈಬಲಿನ ಪ್ರಚಾರಕ್ಕೂ ಕ್ರೈಸ್ತಮತ ಪ್ರಚಾರಕ್ಕೂ, ಮತಾಂತರಗೊಳಿಸುವುದಕ್ಕೂ ಕಳುಹಿಸಿದ ವ್ಯಕ್ತಿಗಳ ಗುಂಪು''

''ಯೇಸು ಕ್ರಿಸ್ತನ ಉತ್ತರಾಧಿಕಾರಿಯಂತೆ ಕಾರ್ಯನಿರ್ವಹಿಸುವ ವಿವಿಧ ಧರ್ಮಸಭೆಗಳ ನಿರ್ದೇಶನಕ್ಕೆ ಒಳಪಟ್ಟು ಕ್ರೈಸ್ತ ಧರ್ಮ ಪ್ರಸಾರ ಮಾಡುವುದೇ ಮಿಷನ್''

"ಧರ್ಮ ಆಸಕ್ತರನ್ನು ಒಟ್ಟುಗೂಡಿಸಿ ಆ ಧರ್ಮದ ಪ್ರಚಾರಕ್ಕಾಗಿ ಕಳುಹಿಸಲ್ಪಡುವ ಸಂಸ್ಥೆಯೇ ಮಿಷನ್"

ಯುರೋಪಿನಲ್ಲಿ ಚರ್ಚುಗಳು ರಾಜಕೀಯ ಶಕ್ತಿಗಳಾಗಿದ್ದ ಅವಧಿಯಲ್ಲಿ ರಾಜನು ಮತ್ತು ಪ್ರಜೆಗಳ ನಡುವೆ ಧರ್ಮಸಭೆಗಳು ಮಧ್ಯವರ್ತಿಗಳಂತೆ ನಿರ್ವಹಿಸುತಿದ್ದ ಕಾರ್ಯವನ್ನಾಧರಿಸಿ ಮಿಷನ್ ಪದಕ್ಕೆ 'ರಾಯಭಾರಿಗಳು' ಎಂಬ ಅರ್ಥವನ್ನು ನೀಡಲಾಗುತ್ತದೆ. ಮಿಷನ್ ಎಂಬ ಪದಕ್ಕೆ ಸಮಾನವಾಗಿ 'ಜೀವನ ಧ್ಯೇಯ' ಎಂಬ ಪದವನ್ನು ಬಳಸುವರು. ಧಾರ್ಮಿಕ ಸುಧಾರಣೆ ಮತ್ತು ಪ್ರತಿಸುಧಾರಣೆಯ ನಂತರ ಯುರೋಪಿನ ಯುವಕ-ಯುವತಿಯರು ಸ್ವಯಂ ಪ್ರೇರಿತರಾಗಿ ತಮ್ಮ ಭೋಗ ಜೀವನವನ್ನು ತ್ಯಾಗಮಾಡಿ ಜೀವನ ಪೂರ್ತಿ ಧರ್ಮ ಸೇವೆಯಲ್ಲಿ ತೊಡಗುವ ಧ್ಯೇಯ ಹೊಂದಿದವರಾಗಿರುತ್ತಿದ್ದರು. ಇದು ಮಿಷನ್ ಪದಕ್ಕೆ 'ಜೀವನ ಧ್ಯೇಯ' ಎಂಬ ಅರ್ಥ ಬರಲು ಕಾರಣವಾಗಿದೆ ಎನ್ನಬಹುದು. ಇತ್ತೀಚಿನ ದಿನಗಳ ಸೈನಿಕ ಮತ್ತು ಆಡಳಿತಾತ್ಮಕ ಕಾರ್ಯಗಳಲ್ಲಿ 'ಮಿಷನ್' ಎಂಬ ಪದವು 'ವಿಶೇಷ ಕಾರ್ಯಾಚರಣೆ' ಎಂಬ ಅರ್ಥದಲ್ಲಿ ಬಳಕೆಯಾಗುತ್ತಿದೆ.

ಮಿಷನರಿ ಎಂಬುದು ಆಂಗ್ಲ ಪದವಾದ ಮಿಷನ್‌ನಿಂದ ಉದ್ಭವಿಸಿದೆ. ಈ ಆಂಗ್ಲ ಪದವು ಕನ್ನಡದಲ್ಲಿ ಅರ್ಥ ಧರ್ಮ ಪ್ರಚಾರಕ, ಧರ್ಮ ಬೋಧಕ ಹಾಗೂ ಪಾದ್ರಿ ಎಂಬ ಅರ್ಥವನ್ನು ಹೊಂದಿದೆ. ಮಿಷನರಿ ಕಾರ್ಯಗಳ ಬಗ್ಗೆ ಅಧ್ಯಯನ ನಡೆಸಿರುವ ಹಿರಿಯ ಸಂಶೋಧಕರಾದ ಡಾ. ವರದಾರಜ ಹುಯಿಲಗೋಳ ಮತ್ತು ಎಡ್ವರ್ಡ್ ನೋರೋರವರು ಮಿಷನರಿ ಪದದ ಬಗ್ಗೆ ಕ್ರಮವಾಗಿ ಈ ಕೆಳಗಿನಂತೆ ಅಭಿಪ್ರಾಯಪಟ್ಟಿದ್ದಾರೆ.

"ಕ್ರೈಸ್ತಮತ ಪ್ರಚಾರದ ಪಂಜನ್ನು ಹಿಡಿದುಕೊಂಡು ಎಲ್ಲೆಡೆಗೆ ಸಾಗಿದರು ಅವರೆ ಮಿಷನರಿಗಳು"

"ಕ್ರೈಸ್ತಧರ್ಮದ ಪ್ರಚಾರವನ್ನೇ ಪ್ರಧಾನ ಉದ್ದೇಶವನ್ನಾಗಿ ಇಟ್ಟುಕೊಂಡು ಕ್ರೈಸ್ತೇತರ ನಡುವೆ ಕೆಲಸ ಮಾಡುವವನೇ ಮಿಷನರಿ"

ಈ ಮೇಲಿನ ಅರ್ಥದಲ್ಲಿಯೇ ಮಿಷನ್ ಮತ್ತು ಮಿಷನರಿ ಪದಗಳನ್ನು ಈ ಪ್ರಬಂಧದಲ್ಲಿ ಬಳಸಲಾಗಿದೆ. ಮಿಷನ್-ಮಿಷನರಿಗಳ ಅರ್ಥದೊಟ್ಟಿಗೆ ಅವುಗಳ ಸ್ಥಾಪನೆಗೆ ಕಾರಣವಾದ ಧರ್ಮ, ಮತ್ತಿನ್ನಿತರ ಅಂಶಗಳು, ಹಾಗೂ ಭಾರತಕ್ಕೆ ಆಗಮಿಸಿದ ಮಿಷನ್-ಮಿಷನರಿಗಳು ಮತ್ತು ಅವರ ನೆಲೆಗಳನ್ನು ತಿಳಿಸುವುದು ಈ ಅಧ್ಯಾಯದ ಉದ್ದೇಶವಾಗಿದೆ.

ಪ್ರಪಂಚದ ಪ್ರಾಚೀನ ಧರ್ಮಗಳಲ್ಲಿ ಕ್ರೈಸ್ತ ಧರ್ಮವೂ ಒಂದು. ಈ ಧರ್ಮವು ಪ್ರಪಂಚದಲ್ಲಿಯೇ ಅತಿ ಹೆಚ್ಚು ಅನುಯಾಯಿಗಳನ್ನು ಹೊಂದಿರುವ ಮತ್ತು ಅಷ್ಟೇ ಬಲವಾದ ವ್ಯವಸ್ಥೆಯನ್ನು ಹೊಂದಿರುವ ಧರ್ಮವಾಗಿದೆ. ಈ ಧರ್ಮದ ಸಂಸ್ಥಾಪಕ ಯೇಸುಕ್ರಿಸ್ತ, ಅಲೆಮಾರಿ ಜನಾಂಗವಾದ ಯಹೂದಿಗಳ ಧರ್ಮವು ಮೂಢನಂಬಿಕೆ, ಕಂದಾಚಾರ, ಮತ್ತು ಪುರೋಹಿತ ಪ್ರಾಬಲ್ಯದಿಂದ ಅವನತಿಯತ್ತ ಸಾಗಿದ್ದಿತು. ಇಂತಹ ಸಾಮಾಜಿಕ ಸನ್ನಿವೇಶದ ಕ್ರಿ.ಪೂ. ನಾಲ್ಕರಲ್ಲಿ ದೇವಪುತ್ರನು ಎನ್ನಿಸಿದ ಯೇಸುವಿಗೆ, ದೇವಕುಮಾರಿಯಾದ ಮರಿಯಳು ಜೆರುಸೆಲಂನ ಬೆತ್ಲಹೇಮ್ ಎಂಬ ಹಳ್ಳಿಯಲ್ಲಿ ಜನ್ಮವಿತ್ತಳು.[೧೨] ಬೆಳೆದ ಯೇಸುವು ಜೀವನದುದ್ದಕ್ಕೂ ದೀನ-ದುರ್ಬಲರ, ಅಸಹಾಯಕರ ಪರವಾಗಿ ನಿಂತು ಅವರಿಗೆ ಆಸರೆಯಾಗಿ ಬೋಧನೆಗಳ ಮೂಲಕ ಕೆಲವೊಮ್ಮೆ ಪವಾಡದಂತಹ ಕಾರ್ಯಗಳನ್ನು ಮಾಡಿ ತೋರಿಸುವ ಮೂಲಕ ಜನರನ್ನು ಸಂತೈಸುತ್ತಿದ್ದನು. ಯೇಸುವಿನ ನೂತನ ಆಚರಣೆ ಮತ್ತು ಬೋಧನೆಗಳನ್ನು ವಿರೋಧಿಸುತ್ತಿದ್ದ ಯಹೂದಿ ಪುರೋಹಿತರು ಯೇಸುವಿನ ಮೇಲೆ ಸಲ್ಲದ ಆರೋಪ ಹೊರಿಸಿ ಶಿಲುಬೆಗೇರಿಸಿದರು. ಯೇಸುವಿನ ಸಾವಿನ ನಂತರ ಅಪೊಸಲ್ಸ್ ಎಂದು ಕರೆಯಲ್ಪಡುವ ಆತನ ಹನ್ನೆರಡು ಶಿಷ್ಯರುಗಳು[೧೩] ಆ ಪ್ರದೇಶವನ್ನು ಬಿಟ್ಟು ನಾನಾ ದಿಕ್ಕುಗಳಲ್ಲಿ ಸಂಚರಿಸಿ ಯೇಸುವಿನ ಬೋಧನೆಗಳನ್ನು ಪಸರಿಸಿದರು. ಮ್ಯಾಥ್ಯೂ, ಮಾರ್ಕ್, ಲ್ಯೂಕ್ ಮತ್ತು ಜಾನ್ ಎಂಬ ನಾಲ್ಕು ಶಿಷ್ಯರು ಯೇಸುವಿನ ಜೀವನ ಮತ್ತು ಬೋಧನೆಗಳನ್ನು ಬರಹ ರೂಪಕ್ಕಿಳಿಸಿದರು. ಈ ಬೋಧನೆಗಳನ್ನು ತಿಳಿದು ಪ್ರೇರಿತರಾದವರೆಲ್ಲಾ, ಆತನು ದೇವಾಂಶ

ಸಂಭೂತನೆಂದು ಒಪ್ಪಿದರು. ಇವರಿಂದ ಆಚರಣೆಗೆ ಬಂದ ಧರ್ಮವೇ ಕ್ರೈಸ್ತ ಧರ್ಮ. ಕ್ರೈಸ್ತ ಎಂಬ ಶಬ್ದಕ್ಕೆ ಹಲವಾರು ಅರ್ಥಗಳನ್ನು ನೀಡಲಾಗಿದೆ. ಅವುಗಳಲ್ಲಿ ಮಾನವತಾವಾದಿ, ತೆರದ ಮನಸ್ಸಿನ ವಿಶಾಲ ಹೃದಯಿ, ಶುದ್ಧ ಮನಸ್ಕ ಎಂಬ ಅರ್ಥದಲ್ಲಿ ಕ್ರೈಸ್ತ ಪದವನ್ನು ಹೆಚ್ಚಾಗಿ ಬಳಸಲಾಗುತ್ತಿದೆ. ಈ ಧರ್ಮೀಯರ ಪವಿತ್ರ ಗ್ರಂಥ ಬೈಬಲ್. ಇದನ್ನು ಎರಡು ಭಾಗಗಳಲ್ಲಿ ಕಾಣುತ್ತೇವೆ. ಒಂದನೆಯದು ಹಳೆ ಒಡಂಬಡಿಕೆ. ಇದು ಯೇಸುವಿನ ಪೂರ್ವದ ವೃತ್ತಾಂತವನ್ನು ತಿಳಿಸುತ್ತದೆ. ಎರಡನೆಯದು ಹೊಸ ಒಡಂಬಡಿಕೆ. ಇದು ಯೇಸುವಿನ ಜೀವನ ಮತ್ತು ಆತನ ಬೋಧನೆ-ಪಾಲನೆಗಳನ್ನು ತಿಳಿಸುತ್ತದೆ.

**ಪಂಥಗಳು**

ಹದಿಮೂರನೆಯ ಶತಮಾನದಲ್ಲಿ ಕ್ರೈಸ್ತ ಸಮುದಾಯವು ಪ್ರತಿಷ್ಠಿತ ವರ್ಗ, ಪುರೋಹಿತ ವರ್ಗ ಮತ್ತು ಸಂಪ್ರದಾಯಸ್ಥರ ವರ್ಗಗಳಿಂದ ಕೂಡಿತ್ತು. ಈ ವರ್ಗಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ಧರ್ಮದ ಆಚರಣೆ ನಂಬಿಕೆಗಳನ್ನು ರೂಢಿಸಿಕೊಂಡಿದ್ದರು ಮತ್ತು ತಮ್ಮ ಆಚರಣೆಯೇ ವಿಶ್ವಮಾನ್ಯವಾಗಬೇಕೆಂಬ ಬಯಕೆ ಹೊಂದಿದ್ದರು. ಈ ಬಯಕೆಯು ರಾಷ್ಟ್ರೀಯತೆಯೊಂದಿಗೆ ಬೆರೆತು ಬೇರೆ ಬೇರೆ ರಾಷ್ಟ್ರಗಳಲ್ಲಿ ಅನ್ಯ ಪಂಥಗಳು ರೂಪತಾಳಲು ಪ್ರೇರಕವಾಯಿತು. ಕ್ರೈಸ್ತ ಧರ್ಮವು ಪ್ರಮುಖ ಐದು ಪಂಥಗಳಲ್ಲಿ ವಿಂಗಡಣೆಯಾಗಿದೆ. ಧಾರ್ಮಿಕ ಸುಧಾರಣೆಯ ಅವಧಿಯಲ್ಲಿ ಮಾರ್ಟಿನ್‌ಲೂಥರ್‌ನ ನೇತೃತ್ವದಲ್ಲಿ ರೋಮ್‌ನ ಪರಮಾಧಿಕಾರವನ್ನು ವಿರೋಧಿಸಿ ಹೊರಬಂದ ಪಂಥವೇ ಪ್ರಾಟೆಸ್ಟಂಟ್ ಪಂಥ. ಮೂಲ ಕ್ರೈಸ್ತ ಸಭೆಯಿಂದ ಬೇರ್ಪಟ್ಟ (ಸಿಜ್ಮ್)ವರನ್ನು ಸಿಜ್ಮಾಟಿಕರು ಎಂದು ಕರೆಯುವರು. ಇಂಗ್ಲೆಂಡಿನ ರಾಜ ಎಂಟನೇ ಹೆನ್ರಿಯು (೧೫೩೪) ಎರಡನೇ ವಿವಾಹವಾಗಬಯಸಿ ಪೋಪ್‌ನ ಅನುಮತಿಯನ್ನು ಕೇಳಿದನು. ಆದರೆ ಪೋಪ್ ಇದಕ್ಕೆ ಸಮ್ಮತಿಸಲಿಲ್ಲ. ಆಗ ಹೆನ್ರಿಯು ಇಂಗ್ಲೆಂಡಿನಲ್ಲಿ ರಾಜಪ್ರಭುತ್ವದ ಅಡಿಯಲ್ಲಿ ಚರ್ಚ್‌ಗಳನ್ನು ಸ್ಥಾಪಿಸಿ ತಾನೇ ಪಾದ್ರಿಗಳನ್ನು ನೇಮಿಸಿದನು. ಹೀಗೆ ಆಂಗ್ಲಿಕನ್ ಪ್ರಾಟೆಸ್ಟಂಟ್ ಪಂಥ ಇಂಗ್ಲೆಂಡಿನಲ್ಲಿ ಅಸ್ತಿತ್ವಕ್ಕೆ ಬಂದಿತು. ಪೋಪ್‌ನ ಅಧಿಕಾರದಿಂದ ಹೊರಗುಳಿದು, ಪೂರ್ವಾತ್ಯ ಚರ್ಚ್‌ನ ಪರಮಾಧಿಕಾರವನ್ನು ಒಪ್ಪಿಕೊಂಡು ಸಿರಿಯಾಕ್ ಭಾಷೆಯಾಡುವ ಕ್ರೈಸ್ತರನ್ನು ಸಿರಿಯನ್ ಕ್ರೈಸ್ತರು ಎಂದು ಕರೆಯಲಾಗುತ್ತದೆ. ಭಾರತದ ಮಲಬಾರ್ ಪ್ರದೇಶದಲ್ಲಿರುವ ಹೆಚ್ಚಿನ ಕ್ರೈಸ್ತರು ಈ ಪಂಥಕ್ಕೆ ಸೇರಿದವರಾಗಿರುತ್ತಾರೆ. ಈ ಮೇಲಿನ ಎಲ್ಲಾ ಪಂಥಗಳಿಂದ ಸಮಾನ ಅಂತರದಲ್ಲಿದ್ದು ಇಗ್ನೇಷಿಯಸ್ ಲಯೋಲಾನಿಂದ ಪ್ರತಿಸುಧಾರಣೆಗೊಂಡ ಮತ್ತು ಪೋಪ್‌ನ ಅಧಿಪತ್ಯಕ್ಕೆ ಒಳಪಟ್ಟಿರುವ ಪಂಥವನ್ನು ರೋಮನ್ ಕ್ಯಾಥೋಲಿಕ್‌ರು ಎನ್ನುವರು. ಇವರು ತಮ್ಮನ್ನು ಮೂಲ ಕ್ರೈಸ್ತರು ಎಂದು ಕರೆದುಕೊಳ್ಳುವರು.

**ಯಾಜಕರು ಮತ್ತು ಉಪಯಾಜಕರು**

ಯೇಸುಕ್ರಿಸ್ತನ ಉಪದೇಶದನ್ವಯ ಬಾಳಲು ಶಾಂತಿ, ಪ್ರೀತಿ, ದಯೆ, ಕರುಣೆ ಇತ್ಯಾದಿ ಗುಣಗಳಿಂದ ಕ್ರಿಸ್ತನಿಗಾಗಿ ಬದುಕಲು ಸಿದ್ಧರಾಗಿ ಬರುವಂತಹವರನ್ನು ಪರೀಕ್ಷಿಸಿ, ಗುರುಮಠಗಳು ಅಧ್ಯಯನ, ಧ್ಯಾನ, ಪಠಣ ಮುಂತಾದವುನ್ನು ಕಲಿಸಿ ಕೊನೆಯಲ್ಲಿ ಧರ್ಮಾಧ್ಯಕ್ಷನಾಗಿದ್ದವರು ಗುರುದೀಕ್ಷೆ ಕೊಟ್ಟು, ಧರ್ಮಸಭೆಯ ವಿಶೇಷ ಸೇವಾಕಾರ್ಯಕ್ಕೆ ಸೇರಿಸಿಕೊಳ್ಳುವರು. ಇದೊಂದು ಮಾನವ ಸೇವೆಯ ಸ್ಥಾನವೇ ಹೊರತು ಅಧಿಕಾರವಲ್ಲ. ಗುರುಗಳಾಗಿ ದೀಕ್ಷೆ ಪಡೆದ ಕ್ಯಾಥೊಲಿಕ್‌ರು ವಿವಾಹವಾಗುವಂತಿಲ್ಲ.

ಉಪಯಾಜಕರಾಗಿ ಸೇವೆ ಸಲ್ಲಿಸುವವರನ್ನು ಧಾರ್ಮಿಕ ಸಹೋದರರು (ಬ್ರದರ್ಸ್) ಎಂದು ಕರೆಯುವರು. ಇವರು ಮುಖ್ಯ ಯಾಜಕರುಗಳಿಗೆ (ಫಾದರ್ಸ್) ಸಹಾಯಕರಾಗಿರುತ್ತಾರೆ. ಪ್ರಾಟೆಸ್ಟಂಟ್‌ರಲ್ಲೂ ಸಹೋದರರು, ಗುರುಗಳು ಇರುತ್ತಾರೆ. ಇವರು ವಿವಾಹವಾಗಬಹುದಾಗಿದೆ. ಕ್ಯಾಥೋಲಿಕರ ಸಹೋದರಿಯರು (ಸಿಸ್ಟರ್ಸ್) ಸೇವಾಭಾವವನ್ನು ಹೊಂದಿ ವಿವಾಹವಾಗದೆ ಕನ್ಯೆಯರಾಗಿಯೇ ಉಳಿದು ಆಸ್ಪತ್ರೆ, ಅನಾಥಾಶ್ರಮ, ಶಿಕ್ಷಣ ಇನ್ನಿತರ

ಸೇವೆಗಳ ಮೂಲಕ ಕ್ರೈಸ್ತಮತ ಪ್ರಚಾರದಲ್ಲಿ ತೊಡಗಿಸಿಕೊಂಡವರನ್ನು ಕನ್ಯಾಸ್ತ್ರೀಯರು ಎಂದು ಕರೆಯುವರು. ಪ್ರಾಟೆಸ್ಟೆಂಟ್‌ರಲ್ಲೂ ಸಹೋದರಿಯರು ಇದ್ದಾರೆ. ಇವರು ವಿವಾಹವಾಗಬಹುದಾಗಿದ್ದು ಸಾಮಾನ್ಯರಂತೆ ಜೀವನ ನಡೆಸುತ್ತಾ ಸಮಾಜಸೇವೆಯಲ್ಲಿ ತೊಡಗಿರುತ್ತಾರೆ.

**ಕ್ರೈಸ್ತರ ಭಾರತ ಪ್ರವೇಶ**

ಕ್ರಿಸ್ತಶಕದ ಆರಂಭದಲ್ಲಿಯೇ ಕ್ರೈಸ್ತ ಸಂತನೊಬ್ಬನು ಭಾರತ ಪ್ರವೇಶಿಸಿದ್ದರ ಬಗ್ಗೆ ವಾದಗಳಿವೆ. ಯೇಸುವಿನ ಹನ್ನೆರಡು ಶಿಷ್ಯರುಗಳಲ್ಲಿ ಒಬ್ಬನಾದ ಸಂತ ಥಾಮಸ್ (ತೋಮಸ್) ಕ್ರಿ.ಶ. ೫೨ ರ ಸುಮಾರಿಗೆ ಕೊಲ್ಲಿ ಪ್ರದೇಶವಾದ ಕ್ರಾಂಗನೂರಿಗೆ ಬಂದಿದ್ದನು. ತೋಮಸ್ ಕ್ರೈಸ್ತರು ಎಂದು ಕರೆಯಲ್ಪಡುವ ಕ್ರೈಸ್ತರು ಇಂದಿಗೂ ಅಲ್ಲಿ ನೆಲೆಸಿದ್ದು, ಇಲ್ಲಿಯ ಬೆಟ್ಟವೊಂದರಲ್ಲಿ ಶಿಲುಬೆ ಚಿಹ್ನೆ ಇರುವ ಸಮಾಧಿ ಕಂಡುಬರುತ್ತದೆ. ಇದನ್ನು ಪ್ರವಾಸಿ ಮಾರ್ಕ್‌ಪೋಲೋ(೧೨೯೩ ಕ್ರಿ.ಶ) ಸಂತ ಥಾಮಸ್‌ನ ಸಮಾಧಿ ಎಂದೂ, ಆ ಬೆಟ್ಟವನ್ನು ಸಂತ ಥಾಮಸ್ ಮೌಂಟ್ ಎಂದು ಕರೆದಿದ್ದಾನೆ. ಈ ವಿಷಯಕ್ಕೆ ಪೂರಕವಾಗಿ ಮತ್ತಷ್ಟು ಪುಷ್ಟಿಕೊಡುವ ಸಂಶೋಧನೆಗಳೆಂದರೆ ಕ್ರಿ.ಶ. ೪ನೇ ಶತಮಾದ ಸಂತ ಎಫ್ರೇಮರ್‌ನ ಕವಿತೆಯಲ್ಲಿ ಮತ್ತು ಗಾಸ್ಪರ್ ಲೂವಿಸ್‌ರವರು ಕೊಂಕಣಿ ಮೌಖಿಕ ಪರಂಪರೆಯಲ್ಲಿ ಗುರುತಿಸಿರುವಂತೆ ಸಂತ ಥಾಮಸ್ ಭಾರತಕ್ಕೆ ಬಂದು ಇಲ್ಲಿಂದ ಪೂರ್ವ ಕರಾವಳಿಯತ್ತ ಸಾಗಿ, ಭಾರತದಲ್ಲಿಯೇ ಮಡಿದನು. ಇಷ್ಟೆಲ್ಲಾ ಇದ್ದಾಗ್ಯೂ ಸಂತ ಥಾಮಸ್‌ನೇ ಭಾರತ ಪ್ರವೇಶಿಸಿದ ಕ್ರೈಸ್ತರಲ್ಲಿ ಮೊದಲಿಗನು ಎಂಬ ವಿಷಯದ ಕುರಿತು ಸಹಮತವಿಲ್ಲ. ಹೀಗೆ ಭಾರತದಲ್ಲಿ ಕ್ರೈಸ್ತಧರ್ಮ ನಿರ್ದಿಷ್ಟವಾಗಿ ಯಾವಾಗ ಪ್ರವೇಶಿಸಿತು ಎಂಬುದರ ಬಗೆಗಿನ ವಾದಗಳಿಗೆ ಕೊನೆಯಿಲ್ಲದಂತಾಗಿದೆ.[೧೪] ಕ್ರಿ.ಶ. ಎರಡನೇ ಶತಮಾನದಷ್ಟೊತ್ತಿಗೆ ಭಾರತದಲ್ಲಿ ಕ್ರೈಸ್ತರಿದ್ದರು ಎಂಬುದರ ಬಗ್ಗೆ ಮಾತ್ರ ಇತಿಹಾಸಕಾರರಲ್ಲಿ ಅನೇಕರಿಗೆ ಒಮ್ಮತವಿದೆ. ಇದೇ ಒಮ್ಮತವು ಕರ್ನಾಟಕಕ್ಕೆ ಸಂಬಂಧಿಸಿದಂತೆ ಕ್ರಿ.ಶ. ಐದನೇ ಶತಮಾನಕ್ಕೆ ಸಲ್ಲುತ್ತದೆ. ಕ್ರಿ.ಶ. ೫೨೨ ರಲ್ಲಿ ದಕ್ಷಿಣ ಭಾರತಕ್ಕೆ ಬಂದಿದ್ದ ಕಾಸ್ಮಸ್ ಎಂಬ ಒಬ್ಬ ಅಲೆಗ್ಸಾಂಡ್ರಿಯಾದ ವ್ಯಾಪಾರಿಯು ಈ ಭಾಗದಲ್ಲಿ ಮತ್ತು ಸಿಲೋನಿನಲ್ಲಿ ನೆಸ್ಟೋರಿಯನ್ ಚರ್ಚುಗಳು ಇದ್ದುದಾಗಿ ತಿಳಿಸಿದ್ದಾನೆ.[೧೫]

ಕ್ರಿ.ಶ. ೭೭೪ ರ ಸುಮಾರಿನಲ್ಲಿ ಮಲಬಾರ್ ಪ್ರದೇಶಕ್ಕೆ ಬಾಗ್ದಾದ್, ನಿನೆವ್ಹ್, ಜೆರುಸೆಲಂ ಮತ್ತಿತರ ಪ್ರದೇಶಗಳ ಕ್ರೈಸ್ತರು ವಲಸೆ ಬಂದಿದ್ದರು. ಇವರುಗಳು ಮೊದಲಬಾರಿಗೆ ಕೆಲ ಸಂಖ್ಯೆಯಷ್ಟು ಸ್ಥಳೀಯರನ್ನು ಮತಾಂತರಗೊಳಿಸಿದ್ದಿರಬಹುದು ಎಂದು ಖ್ಯಾತ ಇತಿಹಾಸಕಾರರಾದ ನೀಲಕಂಠಶಾಸ್ತ್ರಿಯವರು ಅಭಿಪ್ರಾಯಪಟ್ಟಿದ್ದಾರೆ. ಕ್ರಿ.ಶ. ೯೫೦ ರಿಂದ ೧೩೫೦ ರ ವರೆಗೆ ಯುರೋಪಿನ ಬಹುಭಾಗವು ಕ್ರೈಸ್ತಧರ್ಮಕ್ಕೆ ಮತಾಂತರಗೊಂಡ ಪ್ರದೇಶವಾಗಿತ್ತು. ಉಳಿದಂತೆ ಪೂರ್ವ ದೇಶಗಳೆಡೆಗೆ ಹರಡುವ ಯತ್ನದಲ್ಲಿತ್ತು ಎಂದು ತಿಳಿದು ಬರುತ್ತದೆ.[೧೬] ಈ ಮಾಹಿತಿಗೆ ಪೂರಕವಾಗಿ ಎಂಬಂತೆ ಕ್ರಿ.ಶ. ಹದಿನಾಲ್ಕು ಮತ್ತು ಹದಿನೈದನೇ ಶತಮಾನದಲ್ಲಿ ಭಾರತಕ್ಕೆ ಕ್ರೈಸ್ತರ ಆಗಮನ ಹೆಚ್ಚಾಗಿದ್ದುದು ಕಾಣುತ್ತೇವೆ.

ಡೊಮನಿಕನ್ನರು, ಆಗಷ್ಟಯನ್ನರು, ಫ್ರಾನ್ಸಿಸ್ಕರೂ, ಯೇಸುಸಭೆಯವರು ಮುಂತಾದ ಧರ್ಮಸಭೆಗಳು ಭಾರತ ಪ್ರವೇಶಿಸಿದ್ದು ಇದೇ ಕಾಲಘಟ್ಟದಲ್ಲಿ. ಈ ಅವಧಿಯಲ್ಲಿ ದಕ್ಷಿಣ ಭಾರತದ ವಿಜಯನಗರ ಸಾಮ್ರಾಜ್ಯವು ಬಳ್ಳಾರಿ ಪ್ರದೇಶವನ್ನು ಮುಖ್ಯಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ನಡೆಸುತ್ತಿತ್ತು. ವಿಜಯನಗರ ಅರಸರು ತೋರಿದ ಧಾರ್ಮಿಕ ಉದಾರತೆಯಿಂದಾಗಿ ಕ್ರೈಸ್ತರು ಕರ್ನಾಟಕದ ಬಹುಭಾಗಕ್ಕೆ ಹರಡಿಕೊಂಡರು. ವಿಜಯನಗರಕ್ಕೆ ಭೇಟಿ ನೀಡಿದ್ದ ಪೆಟ್ರೊಡೆಲಾವೆಲ್ಲಾ ಎಂಬಾತನು ತನ್ನ ಪ್ರವಾಸ ಕಥನದಲ್ಲಿ ಫಾದರ್ ಫ್ರಾನ್ಸಿಸ್ ನೆಗ್ರೋನೆ ಎಂಬ ಪಾದ್ರಿ ವಿಜಯನಗರ ಅರಸನೊಂದಿಗೆ ಸಂಭಾಷಿಸಿದ್ದರ ಬಗ್ಗೆ ಉಲ್ಲೇಖಿಸಿದ್ದಾನೆ. ಕ್ರಿ.ಶ. ೧೫೦೦ ರಲ್ಲಿ ಭಾರತಕ್ಕೆ ಕಂಡುಹಿಡಿಯಲಾದ ನೂತನ ಜಲಮಾರ್ಗವನ್ನು ಅನುಸರಿಸಿ ಬಂದ ನೌಕಾ ನಾಯಕ ಕಬ್ರಾಲ್ ತನ್ನೊಟ್ಟಿಗೆ

ಎಂಟು ಪಾದ್ರಿಗಳನ್ನು ಕರೆತಂದಿದ್ದನು. ನಂತರ ಫ್ರಾನ್ಸಿಸ್ಕನ್ ಸಭೆಯ ಪಾದ್ರಿ ಫಾ. ಲೂಯಿಸ್ ಸಾಲ್ವಡೋರ್‌ರವರು ೧೫೦೫ರ ಸುಮಾರಿನಲ್ಲಿ ವಿಜಯನಗರದ ಹಂಪೆಗೆ ಪೋರ್ಚುಗಲ್ ರಾಜನ ಆದೇಶದ ಮೇರೆಗೆ ರಾಯಭಾರಿಯಾಗಿ ಬಂದಿದ್ದನು. ಪೋರ್ಚುಗೀಸರು ೧೫೧೦ ರಲ್ಲಿ ಗೋವಾವನ್ನು ಗೆದ್ದ ನಂತರ ಬಂದಂತಹ ಅಪಾರ ಸಂಖ್ಯೆಯ ಯುರೋಪಿಯನ್ನರು ಅಮೆರಿಕಾದಲ್ಲಿಯಂತೆ ಭೂಮಿಯ ಆಕ್ರಮಣದಲ್ಲಿ ತೊಡಗದೆ ವ್ಯಾಪಾರ ಮತ್ತು ಕ್ರೈಸ್ತ ಮತಾಂತರಕ್ಕೆ ಮಾತ್ರ ಸೀಮಿತವಾದರು.[೧೭] ಕೆಳದಿ ಅಳ್ವಿಕೆದಾರರ ಪೋರ್ಚುಗೀಸರೊಂದಿಗಿನ ಸಂಪರ್ಕ ಪರಿಣಾಮ ವ್ಯಾಪಾರಕ್ಕಾಗಿ ಬಂದ ಕ್ರೈಸ್ತರು ಇಲ್ಲಿಯೇ ನೆಲೆನಿಂತು ಕೃಷಿಯಲ್ಲಿ ತೊಡಗಿದ್ದುದು ವಿಶೇಷ. ಇವರುಗಳು ಚರ್ಚ್ ನಿರ್ಮಿಸಿಕೊಳ್ಳಲು ಕೆಳದಿ ಚೆನ್ನಮ್ಮ ಮಂಗಳೂರಿನಲ್ಲಿ ಭೂಮಿ ನೀಡಿದ್ದಳು.[೧೮]

ಮಧ್ಯಕಾಲೀನ ಇತಿಹಾಸದಲ್ಲಿ ಆರಂಭಿಕ ಕ್ರೈಸ್ತ ಧರ್ಮ ಪ್ರಚಾರಕನಾಗಿ ಕಂಡುಬರುವ ಫ್ರಾನ್ಸಿಸ್ ಕ್ಸೇವಿಯರ್ ಮೊದಲು ಗೋವಾದಲ್ಲಿ ನೆಲೆಸಿ ನಂತರ ಕರ್ನಾಟಕದ ಭಾಗದಲ್ಲಿ ಪ್ರಚಾರ ಕಾರ್ಯ ನಡೆಸಿದ್ದನು. ಇಟಲಿ ಮೂಲದ ಶ್ರೀಮಂತ ಕ್ರೈಸ್ತ ವ್ಯಕ್ತಿ ರಾಬರ್ಟೊ ದೆ ನೊಬಿಲಿ (೧೬೦೬-೧೬೫೬) ಎಂಬಾತನು ಭಾರತಕ್ಕೆ ಆಗಮಿಸಿ ತಮಿಳು ಪ್ರಾಂತ್ಯದಲ್ಲಿ ನೆಲೆಸಿದ್ದನು. ತಮಿಳು ಮತ್ತು ಸಂಸ್ಕೃತ ಭಾಷೆಗಳನ್ನು ಕಲಿತನು. ಈ ಭಾಷಾ ಜ್ಞಾನದಿಂದ ವೈದಿಕ ಧರ್ಮದ ಬಗ್ಗೆ ಅಲ್ಪ ಸ್ವಲ್ಪ ತಿಳಿದುಕೊಂಡನು. ಒಮ್ಮೆ ಸ್ವಧರ್ಮದ ಪರವಾಗಿ ಬ್ರಾಹ್ಮಣರ ವಿರುದ್ಧ ವಾದಕ್ಕಿಳಿದನು. ಈ ವಾದದಲ್ಲಿ ಸೋತ ರಾಬರ್ಟೊ ದೆ ನೊಬಿಲಿಯು ಬ್ರಾಹ್ಮಣನಾಗಿ ಪರಿವರ್ತಿತನಾದನು.[೧೯] ಇದು ಮಿಷನರಿಗಳ ಇತಿಹಾಸದಲ್ಲಿ ಒಂದು ವಿಶಿಷ್ಟ ಸಂಗತಿಯಾಗಿದೆ.

ಡೆನ್ಮಾರ್ಕ್ ಮೂಲದ ಡ್ಯಾನಿಷ್ ಮಿಷನ್ನಿಗೆ ಸೇರಿದ ಜೆಜಿನ್‌ಬಾಗ್(Ziegenblg) ಮತ್ತು ಪ್ಲುಟ್ಸು ೧೭೦೫ ರಲ್ಲಿ ಟ್ರಾಂಕ್ವೆಬಾರ್‌ಗೆ ಆಗಮಿಸಿದರು.[೨೦] ಇವರೇ ಭಾರತಕ್ಕೆ ಆಗಮಿಸಿದ ಪ್ರಾಟೆಸ್ಟಂಟ್‌ನ ಮೊದಲ ಮಿಷನರಿಗಳು. ಇವರ ನಂತರ ಸೊಸೈಟಿ ಫಾರ್ ದಿ ಪ್ರೊಪಗೇಶನ್ ಆಫ್ ದಿ ಗಾಸ್ಪಲ್ ಮಿಷನ್ನಿಗೆ ಸೇರಿದ ಮಿಷನರಿಗಳು ೧೭೨೮ ರಲ್ಲಿ ಮದ್ರಾಸ್‌ಗೆ ಆಗಮಿಸಿ ತಮ್ಮ ಕೇಂದ್ರವನ್ನು ತೆರೆದು ಸುಮಾರು ೧೬೦೦ ಮತಾಂತರಗಳನ್ನು ಕೈಗೊಂಡರು.[೨೧] ಇವುಗಳನ್ನು ಹೊರೆತುಪಡಿಸಿ ೧೮೧೩ ರವರೆಗೆ ಮಿಷನರಿಗಳ ಆಗಮನ ಬಹುತೇಕ ರದ್ದಾಗಿದ್ದಿತು. ಕ್ರಿ.ಶ. ೧೮೧೩ ರ ಈಸ್ಟ್ ಇಂಡಿಯಾ ಕಂಪನಿಯ ಒಪ್ಪಂದದ ಸನದನ್ನು ನವೀಕರಿಸುವ ಸಂದರ್ಭದಲ್ಲಿ ಮಿಷನ್ ಸಂಸ್ಥೆಗಳು ಬ್ರಿಟನ್ ಸಂಸತ್ತಿನ ಮೇಲೆ ಕಂಪೆನಿಯು ಪ್ರವೇಶಿಸುವ ಪ್ರದೇಶಗಳಲ್ಲಿ ಧರ್ಮಪ್ರಸಾರಕ್ಕಾಗಿ ಮಿಷನರಿಗಳನ್ನು ತಮ್ಮೊಟ್ಟಿಗೆ ಪ್ರವೇಶಿಸಲು ಅನುಮತಿಸಬೇಕೆಂದು ಒತ್ತಡ ತಂದರು.[೨೨] ಪರಿಣಾಮ ೧೮೧೩ ರ ಚಾರ್ಟರ್ ಕಾಯ್ದೆಯು ಬ್ರಿಟನ್ ಮೂಲದ ಮಿಷನರಿಗಳಿಗೆ ಮಾತ್ರ ಭಾರತ ಪ್ರವೇಶಿಸಲು ಅನುಮತಿ ನೀಡಿತು, ಆದಾಗ್ಯೂ ಮಿಷನರಿಗಳ ಪ್ರವೇಶ ಅಷ್ಟು ಸರಳವಾಗಿರಲಿಲ್ಲ. ಇವರುಗಳು ನಿರ್ದಿಷ್ಟ ಠೇವಣಿ ಹೂಡಿ, ಕಂಪೆನಿ ಷರತ್ತುಗಳಿಗೆ ಪತ್ರಸಹಿತ ಒಪ್ಪಿಗೆ ನೀಡಬೇಕಾಗಿತ್ತು. ಆದರೂ ಕೆಲ ಉತ್ಸಾಹಿ ಯುವಕರು ೧೮೧೩ ರ ಅಧಿಕೃತತೆ ದೊರೆಯುವ ಪೂರ್ವದಲ್ಲಿ ಮಿಷನರಿ ಕಾರ್ಯ ಮಾಡಲು ಕಂಪೆನಿಯ ವ್ಯಾಪಾರಿ ಹಡಗುಗಳಲ್ಲಿ ಬಂದು ಭಾರತ ಸೇರುತ್ತಿದ್ದರು. ಇಂತಹವರು ಕೆಲವೊಮ್ಮೆ ಬ್ರಿಟಿಷ್ ಅಧಿಕಾರಿಗಳ ಕೈಗೆ ಸಿಕ್ಕಾಗ ಅವರನ್ನು ಬಲವಂತವಾಗಿ ಸ್ವದೇಶಕ್ಕೆ ಮರಳಿಸಲಾಗುತ್ತಿತ್ತು. ಕೆಲವೊಮ್ಮೆ ಯಾರೊಬ್ಬ ಬ್ರಿಟಿಷ್ ಅಧಿಕಾರಿಯ ಸಹಕಾರದೊಂದಿಗೆ ಮಿಷನರಿಗಳು ಸುಲಭವಾಗಿ ಭಾರತವನ್ನು ಪ್ರವೇಶಿಸಬಹುದಿತ್ತು. ಈ ರೀತಿ ಆಗಮಿಸಿದ ಮಿಷನರಿಗಳಿಗೆ ಉತ್ತಮ ಉದಾಹರಣೆ ಎಂದರೆ ಬಳ್ಳಾರಿಯ ಲಂಡನ್ ಮಿಷನ್‌ನ ಮಿಷನರಿ ಜಾನ್‌ಹ್ಯಾಂಡ್ಸ್. ಕ್ರಿ.ಶ. ೧೮೧೩ ಚಾರ್ಟರ ಕಾಯ್ದೆಯು ಕೇವಲ ಬ್ರಿಟನ್ ಮೂಲದ ಮಿಷನ್-ಮಿಷನರಿಗಳಿಗೆ ಮಾತ್ರ ಪ್ರವೇಶಿಸಲು ಸಮ್ಮತಿಸಿತ್ತು. ಈ ನಂತರ ತಮಗೂ ಭಾರತ ಪ್ರವೇಶಿಸಲು ಅನುಮತಿ ನೀಡುವಂತೆ ಯುರೋಪಿನ ಅನ್ಯರಾಷ್ಟ್ರಗಳ ಮೂಲದ ಮಿಷನ್-ಮಿಷನರಿಗಳು ಬ್ರಿಟನ್ ಸಂಸತ್ತಿಗೆ ಮನವಿಗಳನ್ನು ಸಲ್ಲಿಸಿದವು. ಈ ಮನವಿಗಳಿಗೆ ಅಷ್ಟು ಪೂರಕವಲ್ಲದ ರೀತಿಯಲ್ಲಿ ೧೮೩೩ ರ ಚಾರ್ಟರ್ ಕಾಯ್ದೆಯಲ್ಲಿ ಕೇವಲ ಪ್ರಾಟೆಸ್ಟಂಟ್ ರಾಷ್ಟ್ರಗಳ ಮಿಷನರಿಗಳಿಗೆ ಮಾತ್ರ

ಪ್ರವೇಶಿಸಲು ಅನುಮತಿ ನೀಡಿತು. ೧೮೫೮ ರಲ್ಲಿ ಭಾರತದ ಮೇಲಿನ ಅಧಿಕಾರವು ಈಸ್ಟ್ ಇಂಡಿಯಾ ಕಂಪನಿಯಿಂದ ಬ್ರಿಟಿಷ್ ಸರಕಾರಕ್ಕೆ ಹಸ್ತಾಂತರವಾಯಿತು. ಈ ನಂತರ ಕ್ಯಾಥೋಲಿಕ್ ಮಿಷನರಿಗಳಿಗೆ ಭಾರತ ಪ್ರವೇಶಿಸಲು ಅಧಿಕೃತತೆ ದೊರೆಯಿತು. ಹೀಗೆ ವಸಾಹತು ಕಾಲದ ಈ ಮೇಲಿನ ಕಾಯ್ದೆಗಳ ಅನುಮತಿಯ ಪ್ರಭಾವವನ್ನು ಹಾಗೂ ಮದ್ರಾಸ್ ಮತ್ತು ಮೈಸೂರು ಬೆಂಗಳೂರುಗಳ ಮೂಲಕ ಭಾರತವನ್ನು ಪ್ರವೇಶಿಸಿದ ಮಿಷನ್‌ಗಳ ವಿವರಗಳನ್ನು, ಪೂರಕ ಮಾಹಿತಿಯನ್ನು ಈ ಕೆಳಗಿನ ಕಾಲಾನುಕ್ರಮಣಿಕೆಯ ಪಟ್ಟಿಯು ನೀಡುತ್ತದೆ.[೨೩]

### ಮದ್ರಾಸ್ ಪ್ರೆಸಿಡೆನ್ಸಿ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸಿದ ಪ್ರಾಟೆಸ್ಟಂಟ್ ಮಿಷನ್‌ಗಳು

| | |
|---|---|
| ೧. ಡ್ಯಾನಿಷ್ ಮಿಷನ್ | ೧೭೦೫ |
| ೨. ಸೊಸೈಟಿ ಫಾರ್ ದಿ ಪ್ರಾಪಗೇಶನ್ ಆಫ್ ದಿ ಗಾಸ್ಪಲ್ | ೧೭೨೮ |
| ೩. ಲಂಡನ್ ಮಿಷನರಿ ಸೊಸೈಟಿ | ೧೮೦೪ |
| ೪. ದಿ ಚರ್ಚ್ ಮಿಷನರಿ ಸೊಸೈಟಿ | ೧೮೧೪ |
| ೫. ವೆಸ್ಲಿಯನ್ ಮಿಷನ್ | ೧೮೧೮ |
| ೬. ಅಮೆರಿಕನ್ ಮದುರ ಮಿಷನ್ | ೧೮೩೪ |
| ೭. ಬಾಸೆಲ್ ಇವ್ಯಾಂಜಲಿಕಲ್ ಮಿಷನ್ | ೧೮೩೪ |
| ೮. ಅಮೆರಿಕನ್ ಬ್ಯಾಪ್ಟಿಸ್ಟ್ ತೆಲುಗು ಮಿಷನ್ | ೧೮೩೬ |
| ೯. ಫ್ರೀ ಚರ್ಚ್ ಆಫ್ ಸ್ಕಾಟ್‌ಲ್ಯಾಂಡ್ ಮಿಷನ್ | ೧೮೩೭ |
| ೧೦. ಇವ್ಯಾಂಜಲಿಕಲ್ ಲೂಥರನ್ ಮಿಷನ್ ಆಫ್ ಲಿಪ್‌ಜಿಗ್ | ೧೮೪೦ |
| ೧೧. ಅಮೆರಿಕನ್ ಇವ್ಯಾಂಜಲಿಕಲ್ ಲೂಥರನ್ ಮಿಷನ್ | ೧೮೪೨ |
| ೧೨. ಅರ್ಕಾಟ್ ಮಿಷನ್ ಆಫ್ ರಿಫಾರ್ಮ್ಡ್ ಚರ್ಚ್ ಆಫ್ ಅಮೆರಿಕಾ | ೧೮೫೧ |
| ೧೩. ಸ್ಟ್ರಿಕ್ಟ್ ಬ್ಯಾಪ್ಟಿಸ್ಟ್ ಮಿಷನ್ | ೧೮೬೬ |
| ೧೪. ಹೆರ್ಮನ್ಸ್‌ಬರ್ಗ್ ಇವ್ಯಾಂಜಲಿಕಲ್ ಲೂಥರನ್ ಮಿಷನ್ | ೧೮೬೬ |

### ಕರ್ನಾಟಕದಲ್ಲಿ ಕಾರ್ಯನಿರ್ವಹಿಸಿದ ಪ್ರಮುಖ ಮಿಷನ್‌ಗಳು

| | |
|---|---|
| ೧. ಕಾರ್ಮೆಲ್ ಸಭೆ | ೧೮೩೮ |
| ೨. ಗುಡ್‌ಶೆಫರ್ಡ್ ಕನ್ಯಾಸಹೋದರಿಯರ ಸಭೆ | ೧೮೫೪ |
| ೩. ಅಪೋಸ್ಥಲಿಕ್ ಕಾರ್ಮೆಲ್ ಸಭೆ | ೧೮೭೦ |
| ೪. ಕ್ಲಾಯಿಸ್ಟರ್ಡ್ ಕಾರ್ಮೆಲ್ ಸನ್ಯಾಸಿ ಸಭೆ | ೧೮೭೦ |

೫. ಯೇಸು ಸಭೆ ೧೮೭೮

೬. ಸೇಂಟ್ ಜೋಸೆಫ್ ಆಫ್ ಟಾರ್ಬ್ಸ್ ಸಭೆ ೧೮೮೨

೭. ಅರ್ಸುಲೈನ್ ಫ್ರಾನ್ಸಿಸ್ಕನ್ ಸಭೆ ೧೮೮೭

೮. ಫಾತಿಮಾ ಮಾತೆ ಸಭೆ ೧೮೯೬

೯. ಸಿಸ್ಟರ್ಸ್ ಆಫ್ ಚಾರಿಟಿ ಆಫ್ ಸೇಂಟ್

ಬಾರ್ತೋಲೋಮಿಯಾ ಕಪಿತಾನಿಯೋ ಅಂಡ್ ವಿನ್ಸೆಂತ್ಸಿಯಾ ಜರೋಸಾ ೧೮೯೮

೧೦. ಲಿಟಿಲ್‌ಫ್ಲವರ್ ಆಫ್ ದಿ ಪೂವರ್ ೧೯೦೦

೧೧. ಸಲೇಶಿಯನ್ ಮಿಷನರೀಸ್ ಆಫ್ ಮೇರಿ ಇಮ್ಯಾಕುಲೇಟ್ ೧೯೧೪

೧೨. ಬೆಥನಿಯಾ ಲಿಟ್ಲ್‌ಫ್ಲವರ್ ಸಿಸ್ಟರ್ಸ್ ೧೯೨೧

೧೩. ಫ್ರಾನ್ಸಿಸ್ಕನ್ ಸಭೆ ೧೯೨೮

೧೪. ಸಂತ ಚಾರ್ಲ್ಸ್ ಬೊರೋಮಿಯೋ ಕನ್ಯಾಸಹೋದರಿಯರ ಸಭೆ ೧೯೨೮

೧೫. ಕಾಪುಚಿನ್ ಸಭೆ ೧೯೩೦

೧೬. ರೆಡೋಂಪ್ಟರಿಸ್ಟ್ ಮಿಷನ್ ಸಭೆ ೧೯೩೯

೧೭. ಕಾರ್ಮೆಲೈಟ್ ಸಿಸ್ಟರ್ಸ್ ಆಫ್ ಸೇಂಟ್ ಥೆರೇಸಾ ೧೯೪೪

೧೮. ಬೆನೆಡಿಕ್ಟೈನ್ ಸಭೆ ೧೯೫೨

ಕ್ರಿ.ಶ. ೧೮ನೇ ಶತಮಾನದ ಮೊದಲಿಗೆ ಆಗಮಿಸಿದ ಕ್ರೈಸ್ತಧರ್ಮೀಯರು ಹಾಗು ಪ್ರಚಾರಕರುಗಳೆಲ್ಲ ಭಾಗಶಃ ಕ್ಯಾಥೊಲಿಕರುಗಳು. ಇವರು ಪೋರ್ಚುಗೀಸರ ಅವಧಿಯಲ್ಲಿ ಗೋವಾ ಮತ್ತು ಮಲಬಾರ್ ಪ್ರದೇಶಗಳ ಮೂಲಕ ಕರ್ನಾಟಕ ಮತ್ತಿನ್ನಿತರ ಪ್ರದೇಶಗಳಿಗೆ ಹರಡಿದರು. ಪ್ರಾಟೆಸ್ಟೆಂಟರು ಬ್ರಿಟಿಷರ ಅಧಿಪತ್ಯದಲ್ಲಿ ಭಾರತದಲ್ಲಿ ಮದ್ರಾಸ್ ಮೂಲಕ ಕರ್ನಾಟಕ ಮತ್ತು ಇತರ ಅನ್ಯಪ್ರದೇಶಗಳಿಗೆ ಪಸರಿಸಿದರು. ಹಾಗಾಗಿ ಮದ್ರಾಸ್ ಮತ್ತು ಮೈಸೂರು ಆಡಳಿತಗಳನ್ನು ಕೇಂದ್ರವಾಗಿಟ್ಟುಕೊಂಡು ಹರಡಿದ ಮಿಷನ್‌ಗಳ ಪಟ್ಟಿಯನ್ನು ಮಾತ್ರ ನೀಡಲಾಗಿದೆ.[೨೫]

**ಅಡಿಟಿಪ್ಪಣಿಗಳು**


೧. **ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್**, ಮೈಸೂರ್ಸ್ ಸ್ಟೇಟ್, ಮೈಸೂರು ಸರ್ಕಾರ, ಬೆಂಗಳೂರು, ೧೯೭೨, ಪುಟ.೧

೨. **ಅದೇ**, ಪುಟ. ೧೧

೩. ಕೊಂಡೂರಿ ಸರೋಜಿನಿ, ರಿಲೀಜಿಯನ್ ಇನ್ ವಿಜಯನಗರ ಎಂಪೈರ್, ಸ್ಟೆರಿಲಿಂಗ್ ಪಬ್ಲಿಕೇಷನ್ಸ್ ಪ್ರೈ ಲಿ. ನ್ಯೂ ಡೆಲ್ಲಿ, ೧೯೯೦, ಪುಟ. ೨೧

೪. **ಅದೇ**, ಪುಟ. ೧೯೨

೫. ಸಿ. ಡಿ. ಮ್ಯಾಕ್ಲಿನ್, **ಪೂರ್ವೋಕ್ತ**, ಸಂಪುಟ - ೨, ಪುಟ. ೨೭೭

೬. **ಅದೇ**, ಪುಟ. ೫೯

೭. **ಅದೇ**, ಪುಟ. ೫೦೧

೮. ಪ್ರೊ. ಷೇಕ್ ಅಲಿ, **ಕರ್ನಾಟಕ ಚರಿತ್ರೆ**, ಸಂಪುಟ ೬, ಪ್ರಸಾರಾಂಗ, ಕ.ವಿ.ವಿ. ಹಂಪಿ, ೧೯೯೭, ಪುಟ.೨೨೨

೯. ಕುಂಬಾಸ, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ**, ಶ್ರೀ ಮಾಲತೇಶ ಪ್ರಕಾಶನ, ಹರಪನಹಳ್ಳಿ, ೧೯೯೦, ಪುಟ.೩೮

೧೦. ಕೆ. ಅನಂತರಾಮರಾವ್, **ಸುವರ್ಣ ಕರ್ನಾಟಕ ದರ್ಶನ**, ವಿದ್ಯಾ ಪಬ್ಲಿಶಿಂಗ್ ಹೌಸ್, ಮಂಗಳೂರು, ೨೦೦೦, ಪುಟ.೬೨

೧೧. ಮಿರ್ಸಿಯಾ ಎಲೈಡ, ದಿ ಎನ್‌ಸೈಕ್ಲೋಪೀಡಿಯಾ ಆಫ್ ರೀಲಿಜಿಯನ್, ಕೊಲ್ಲೇರ್ ಮ್ಯಾಕ್‌ಮಿಲನಂ ಪಬ್ಲಿಕೇಷನ್ಸ್, ಲಂಡನ್, ೧೯೮೭, ಪುಟ. ೫೬೭

೧೨. ತಂಬಂಡ ವಿಜಯಪೂಣಚ್ಚ, **ಚರಿತ್ರೆ ವಿಶ್ವಕೋಶ** ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೧

೧೩. ಪೀಟರ್, ಆ್ಯಂಡ್ರ್ಯೂ, ಜೇಮ್ಸ್, ಜಾನ್, ಮ್ಯಾಥ್ಯೂ, ಫಿಲಿಫ್, ಬರ್ತಲೋಮಿಯೋ, ಥಾಮಸ್, ಕಿರಿಯ ಯಾಕೋಬಾ, ಸೈಮನ್, ಜುಡಾಸ್, ಜುಡಾಸ್ ಇಸ್‌ಕರಿಯಟ್

೧೪. ಮಿರ್ಸಿಯಾ ಎಲೈಡ, **ಪೂರ್ವೋಕ್ತ**, ಪುಟ. ೪೨೨

೧೫. ನೀಲಕಂಠ ಶಾಸ್ತ್ರಿ, ಎ ಹಿಸ್ಟರಿ ಆಫ್ ಸೌತ್ ಇಂಡಿಯಾ, ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್, ೧೯೭೫, ಪುಟ. ೪೪೦

೧೬. ಪೀಟರ್ ಬಿ. ನಾರ್ಟನ್, ದಿ ಎನ್‌ಸೈಕ್ರೋಪೀಡಿಯಾ ಆಫ್ ಬ್ರಿಟಾನಿಕಾ, ಸಂಪುಟ-೮, ಯೂನಿವರ್ಸಿಟಿ ಆಫ್ ಚಿಕಾಗೋ, ೧೯೯೨, ಪುಟ. ೧೮೭

೧೭. ಮಿರ್ಸಿಯಾ ಎಲೈಡ, **ಪೂರ್ವೋಕ್ತ**, ಪುಟ.೪೨೨

೧೮. ಸೂರ್ಯನಾಥ್ ಯು. ಕಾಮತ್, **ಕರ್ನಾಟಕ ಸ್ಟೇಟ್ ಗೆಜೆಟಿಯರ್**, ಭಾಗ ಒಂದು, ಕರ್ನಾಟಕ ಸರ್ಕಾರ, ಬೆಂಗಳೂರು, ೧೯೮೨, ಪುಟ. ೪೩೧

೧೯. ಮಿರ್ಸಿಯಾ ಎಲೈಡ, **ಪೂರ್ವೋಕ್ತ**, ಪುಟ. ೪೨೨

೨೦. ಸಿ. ಡಿ. ಮ್ಯಾಕ್ಲೀನ್, **ಮದ್ರಾಸ್ ಪ್ರೆಸಿಡೆನ್ಸಿ ಮ್ಯಾನುಯಲ್**, ಸಂಪುಟ -೧, ಏಷಿಯನ್ ಎಜ್ಯುಕೇಷನಲ್ ಸರ್ವಿಸಸ್, ಮದ್ರಾಸ್, ೧೯೮೯, ಪುಟ. ೪೫೪

೨೧. ಸಿ. ಡಿ. ಮ್ಯಾಕ್ಲಿನ್, **ಪೂರ್ವೋಕ್ತ**, ಸಂಪುಟ - ೨, ಪುಟ. ೪೫೫

೨೨. ಆರ್. ಸಿ. ಮಜುಂದಾರ್, ಬ್ರಿಟಿಷ್ ಪ್ಯಾರಾಮೌಂಟಸಿ ಆ್ಯಂಡ್ ಇಂಡಿಯನ್ ರೆನೈಜಾನ್ಸ್, ಭಾಗ ಎರಡು, ಭಾರತೀಯ ವಿಧ್ಯಾಭವನ್, ಬಾಂಬೆ, ೧೯೬೫, ಪುಟ. ೧೫೨

೨೩. ಸಿ. ಡಿ. ಮ್ಯಾಕ್ಲಿನ್, **ಪೂರ್ವೋಕ್ತ**, ಸಂಪುಟ - ೨, ಪುಟ. ೪೫೮

೨೪. ಫಾ. ಕೆ. ಎ. ಮ್ಯಾಥ್ಯೂ, **ಕರ್ನಾಟಕದ ಧರ್ಮಸಭೆ**, ರೇಗೊ ಅಂಡ್ ಸನ್ಸ್, ಬೆಂಗಳೂರು, ೧೯೯೮, ಪುಟ ೧೬೧ ರಿಂದ ೧೭೮

**ಕ**ರ್ನಾಟಕ ಇತಿಹಾಸದಲ್ಲಿ ಮಿಷನರಿ ಕಾರ್ಯಗಳು ೧೭ನೇ ಶತಮಾನದಿಂದ ಆರಂಭವಾಗಿದ್ದರೂ, ಅದು ಮಂಗಳೂರು, ಬೆಂಗಳೂರು, ಮೈಸೂರು ಕೇಂದ್ರಿತ ಮಿಷನರಿಗಳಾಗಿದ್ದವು. ಜೆಸುಯಿಟ್ ಪಾದ್ರಿಯಾದ ಲಿಯೊನಾರ್ಡೊ ಸಿನ್ನಾಮಿಯವರು[೧] ಮಿಷನರಿ ಕಾರ್ಯ ನಿರ್ವಹಿಸಿದವರಲ್ಲಿ ಪ್ರಥಮರು. ಬಳ್ಳಾರಿ ಪ್ರದೇಶಕ್ಕೆ ೧೬ನೇ ಶತಮಾನದಲ್ಲಿ ಕ್ರೈಸ್ತರು ಆಗಮಿಸಿದ್ದರೂ ಅವರನ್ನು ಮಿಷನರಿ ಎಂದು ಪರಿಗಣಿಸಿಲ್ಲ. ಏಕೆಂದರೆ ಅವರುಗಳು ರಾಜತಾಂತ್ರಿಕ ಅಥವಾ ಸಂಚಾರಿ ಕಾರಣವಾಗಿ ಬಂದಿದ್ದರೆ ಹೊರತು ಮಿಷನರಿ ಕಾರ್ಯ ನಿರ್ವಹಿಸಲು ಅಲ್ಲ. ೧೯ನೇ ಶತಮಾನದ ಆರಂಭದ ದಶಕದಲ್ಲಿ ಸಕ್ರಿಯ ಮಿಷನರಿ ಕಾರ್ಯಗಳು ಬಳ್ಳಾರಿ ಪ್ರದೇಶದಲ್ಲಿ ಕಂಡುಬರುತ್ತವೆ. ಬಳ್ಳಾರಿಗೆ ಬಂದ ಈ ಮೊದಲ ಮಿಷನರಿಯು ಕರ್ನಾಟಕಕ್ಕೆ ಬಂದ ಪ್ರಥಮ ಪ್ರಾಟೆಸ್ಟೆಂಟ್ ಮಿಷನರಿಯೂ ಹೌದು. ೧೯ನೇ ಶತಮಾನದ ಪ್ರಥಮಾರ್ಧದಲ್ಲಿ ಕಂಡುಬರುವ ಮಿಷನರಿ ಕೊಡುಗೆಗಳು ಉತ್ತರಾರ್ಧದಲ್ಲಿ ಕಂಡುಬರುವುದಿಲ್ಲ. ಬಳ್ಳಾರಿ ಪ್ರದೇಶಕ್ಕೆ ಮೊದಲಿಗೆ ಬಂದ ಮಿಷನ್-ಮಿಷನರಿಗಳನ್ನು ಕೇಂದ್ರವಾಗಿಟ್ಟುಕೊಂಡು ಮೊದಲಿಗೆ ಪ್ರಾಟೆಸ್ಟೆಂಟ್ ಮಿಷನ್-ಮಿಷನರಿಗಳ ಬಗ್ಗೆ ಅನಂತರ ಕ್ಯಾಥೊಲಿಕ್ ಮಿಷನ್-ಮಿಷನರಿಗಳ ಬಗ್ಗೆ ವಿವರಿಸಲಾಗಿದೆ.

## ಪ್ರಾಟೆಸ್ಟೆಂಟ್ ಮಿಷನರಿಗಳು

### ಲಂಡನ್ ಮಿಷನ್

ಕ್ರಿ.ಶ. ೧೭೯೫ರ ಆಗಸ್ಟ್ ೨೧ ರಂದು ಡಾ. ಡೇವಿಡ್ ಬೋಗ್‌ರವರಿಂದ ಇಂಗ್ಲೆಂಡಿನಲ್ಲಿ ಸ್ಥಾಪನೆಯಾದ ಮಿಷನರಿ ಸೊಸೈಟಿಯು ಮುಂದೆ ಲಂಡನ್ ಮಿಷನ್ ಸೊಸೈಟಿ ಎಂದು ಹೆಸರಾಯಿತು. ಪ್ರಪಂಚದಲ್ಲಿ ಸ್ಥಾಪನೆಯಾದ ಪ್ರಾಟೆಸ್ಟೆಂಟ್ ಮಿಷನರಿಗಳಲ್ಲಿ ಇದು ಎರಡನೆಯದು (ಮೊದಲು ೧೭೯೨ರಲ್ಲಿ ಸ್ಥಾಪನೆಯಾದ ಬ್ಯಾಪ್ಟಿಸ್ಟ್ ಮಿಷನ್). ಧರ್ಮ ಪ್ರಸಾರ ಕಾರ್ಯದಲ್ಲಿ ಆಸಕ್ತ ಹೊಂದಿದವರಿಗೆ ತರಬೇತಿಯನ್ನು ನೀಡುವ ಕೇಂದ್ರವಾಯಿತು. ೧೮೧೦ ರಲ್ಲಿ ಬಳ್ಳಾರಿಗೆ ಆಗಮಿಸಿದ ಪ್ರಥಮ ಮಿಷನರಿ ಜಾನ್‌ಹ್ಯಾಂಡ್ಸ್ ಈ ಮಿಷನ್‌ನ ಲಂಡನ್ ಕೇಂದ್ರದಲ್ಲಿ ತರಬೇತಿ ಹೊಂದಿದ್ದರು. ಮಿಷನರಿ ಮೂಲಕ ಲಂಡನ್ ಮಿಷನ್ ತನ್ನ ಕೇಂದ್ರವನ್ನು ಬಳ್ಳಾರಿಯಲ್ಲಿ ಸ್ಥಾಪಿಸಿತು. ೧೮೨೦ ರ ಸುಮಾರಿಗೆ ಈ ಕೇಂದ್ರವು ತನ್ನ ಚಟುವಟಿಕೆಗಳನ್ನು ಬೆಳಗಾವಿ, ಧಾರವಾಡ, ಬೆಂಗಳೂರುಗಳಿಗೂ ವಿಸ್ತರಿಸಿತು. ಈ ಮಿಷನ್ನಿನ ಪ್ರೋತ್ಸಾಹದಿಂದಾಗಿ ಮಿಷನರಿಗಳು ಕನ್ನಡ ಸಾಹಿತ್ಯಕ್ಕೆ, ಮುದ್ರಣಕ್ಕೆ ಉತ್ತಮ ಚಾಲನೆ ನೀಡಿದರು. ಇದರಿಂದ ಶಿಕ್ಷಣಕ್ಕೂ ಚಾಲನೆ ದೊರಕಿತು. ರಾಜ್ಯದಲ್ಲಿ ಪ್ರಥಮ ಬಾಲಕಿಯರ ಶಾಲೆ, ಪ್ರಥಮ ಬಾಲಕಿಯರ ಪ್ರೌಢಶಾಲೆಯನ್ನು ಕ್ರಮವಾಗಿ ಬಳ್ಳಾರಿ, ಬೆಂಗಳೂರುಗಳಲ್ಲಿ ಸ್ಥಾಪಿಸಿದ ಕೀರ್ತಿ ಲಂಡನ್ ಮಿಷನ್‌ಗೆ ಸಲ್ಲುತ್ತದೆ. ೧೯೬೦ ರವರೆಗೂ ಬಳ್ಳಾರಿಯಲ್ಲಿ ಸೇವೆ ಸಲ್ಲಿಸಿದ ಲಂಡನ್ ಮಿಷನ್ ಅದೇ ವರ್ಷದಂದು ಹಲವಾರು ಪ್ರಾಟೆಸ್ಟೆಂಟ್ ಸಭೆಗಳ ಐಕ್ಯ ಸಭೆಯಾದ ದಕ್ಷಿಣಭಾರತದ ಧರ್ಮಸಭೆ(Church of South India)ಯಲ್ಲಿ ವಿಲೀನವಾಯಿತು. ೧೮೧೦ ರಿಂದ ೧೯೬೦ ರ ವರೆಗೆ ಲಂಡನ್ ಮಿಷನ್ ಸೊಸೈಟಿ ಅಡಿಯಲ್ಲಿ ಬಳ್ಳಾರಿ ಪ್ರದೇಶದಲ್ಲಿ ಕಾರ್ಯನಿರ್ವಹಿಸದ ಪ್ರಮುಖ ಮಿಷನರಿಗಳಾಗಿವೆ.

## ಜಾನ್ ಹ್ಯಾಂಡ್ಸ್

ಈಸ್ಟ್ ಇಂಡಿಯಾ ಕಂಪೆನಿಯು ಮೊದಲಿನಿಂದಲೂ ಮಿಷನರಿಗಳ ಆಗಮನವನ್ನು ನಿಷೇದಿಸಿದ್ದಿತು. ೧೮೧೩ ರಲ್ಲಿ ಚಾರ್ಟರ್ ಕಾಯ್ದೆಯ ಮೂಲಕ ಕೇವಲ ಇಂಗ್ಲೆಂಡ್ ಮೂಲದ ಮಿಷನರಿಗಳಿಗೆ ಮಾತ್ರ ಭಾರತ ಪ್ರವೇಶಿಸಲು ಅನುಮತಿಸಿತು.[೨] ಈ ಅಧಿಕೃತತೆ ದೊರೆಯುವ ಪೂರ್ವದಲ್ಲಿ ಟ್ರಾಂಕ್ವೆಬಾರಿಗೆ ೧೮೦೪ ರಲ್ಲಿ ಬಂದಿಳಿದ ಉತ್ಸಾಹಿ ಯುವಕ ಜಾನ್ ಹ್ಯಾಂಡ್ಸ್ ಬ್ರಿಟೀಷ್ ಅಧಿಕಾರಿಯೊಬ್ಬನ ಸಹಾಯದಿಂದಾಗಿ ನಾಡು ಪ್ರವೇಶಿಸಿದನು. ವಿಶಾಖಪಟ್ಟಣದಲ್ಲಿ ಕೆಲಕಾಲ ನೆಲೆಸಿದ ನಂತರ ೧೮೧೦ ರಲ್ಲಿ ಬಳ್ಳಾರಿಗೆ ಬಂದನು.[೩] ಈ ಮಧ್ಯೆ ತಾನು ಶ್ರೀರಂಗಪಟ್ಟಣದಲ್ಲಿ ಮಿಷನರಿ ಕೇಂದ್ರ ಸ್ಥಾಪಿಸಲು ಉದ್ದೇಶಿಸಿದ್ದನು.[೪] ಅನಂತರ ಶ್ರೀರಂಗಪಟ್ಟಣದ ಅಂದಿನ ಸಂದಿಗ್ಧ ಪರಿಸ್ಥಿತಿಯನ್ನು ಅವಲೋಕಿಸಿ ತಾನು ಬಳ್ಳಾರಿಗೆ ಬರಲು ನಿರ್ಧರಿಸಿದನು. ಬಳ್ಳಾರಿಯು ಅಂದು ಮದ್ರಾಸ್ ಪ್ರೆಸಿಡೆನ್ಸಿಯ ನೂತನ ದಂಡು ಕೇಂದ್ರವಾಗಿದ್ದಿತು. ಇವರನ್ನು ಅನುಸರಿಸಿ ಬಂದ ತಮಿಳು ಕ್ರೈಸ್ತರ ಸಂಖ್ಯೆಯೂ ಹೆಚ್ಚಿದ್ದಿತು. ಬಳ್ಳಾರಿಯಲ್ಲಿ ಈ ಕ್ರೈಸ್ತರ ಧರ್ಮ ಬೋಧನೆಯ ಉದ್ದೇಶಕ್ಕಾಗಿ ಜಾನ್ ಹ್ಯಾಂಡ್ಸರು ನೆಲೆ ನಿಂತು ೧೮೧೦ ರ ಮೇ ತಿಂಗಳಿನಲ್ಲಿ ಲಂಡನ್ ಮಿಷನ್ ಕೇಂದ್ರವನ್ನು ಸ್ಥಾಪಿಸಿದನು.

ಹ್ಯಾಂಡ್ಸ್‌ರವರು ಬಳ್ಳಾರಿಗೆ ಬಂದ ಕೂಡಲೆ ಅವರಿಗೆ ಅಗತ್ಯವೆಂದು ಕಂಡದ್ದು ಭಾಷಾ ಕಲಿಕೆ. ಈತನೇ ಪ್ರಥಮ ಮಿಷನರಿಯಾದ್ದರಿಂದ ಅನಂತರ ಬಂದವರಿಗೆ ಲಭ್ಯವಾದ ಕೋಶ, ವ್ಯಾಕರಣ ಇನ್ನಿತರ ಸಾಧನಗಳು ಲಭ್ಯವಿರಲಿಲ್ಲ. ಕಠಿಣ ಪರಿಶ್ರಮದ ನಂತರ ಕನ್ನಡ ಕಲಿತ ಇವರು ೧೮೧೨-೧೮೧೩ ರ ಸುಮಾರಿನಲ್ಲಿ ಕನ್ನಡ ವ್ಯಾಕರಣ ಮತ್ತು ಶಬ್ದಕೋಶವನ್ನು ರಚಿಸಿದರು. ವಾಕ್ಯ ರಚನೆಯಲ್ಲಿ ಪರಿಪೂರ್ಣತೆ ಹೊಂದಿದ ನಂತರ ಹೊಸ ಒಡಂಬಡಿಕೆಯ ಕೆಲವು ಅಧ್ಯಾಯಗಳನ್ನು ಕನ್ನಡಕ್ಕೆ ಅನುವಾದಿಸಿದರು. ಆರಂಭದಲ್ಲಿ ಅಧ್ಯಾಯಗಳ ಕೆಲ ಭಾಗಗಳನ್ನು ಮಾತ್ರ ಬರೆಯಿಸಿ ಹಂಚಿದರು. ೧೮೨೦ ರಲ್ಲಿ ಮದ್ರಾಸಿಗೆ ತೆರಳಿ ಅಲ್ಲಿ ಈ ಕೃತಿಯ ಸಿದ್ಧತೆಯಲ್ಲಿ ತೊಡಗಿದ. ಫಲವಾಗಿ ಕನ್ನಡಕ್ಕೆ ಅನುವಾದಗೊಂಡ ಪ್ರಥಮ ಬೈಬಲ್ ಕೃತಿಯು ಮುದ್ರಣಗೊಂಡಿತು. ೩೦೦೦ ಪುಟಗಳ ಬೃಹತ್ ಗ್ರಂಥ ಇದಾಗಿತ್ತು. ಇದಕ್ಕೆ ಕಾರಣ ಮುದ್ರಣಕ್ಕಾಗಿ ಬಳಸಿದ ಅಕ್ಷರದ ಗಾತ್ರ ದೊಡ್ಡದಾಗಿದ್ದುದು.

೧೮೧೧ ರಲ್ಲಿ ಕೋಟೆಯ ಪ್ರದೇಶದಲ್ಲಿ ಬ್ರಿಟಿಷ್ ಸೈನಿಕರು ಮತ್ತು ಸ್ಥಳೀಯ ಸ್ತ್ರೀಯರಿಗೆ ಜನಿಸಿದ ಮಕ್ಕಳು ಅನಾಥವಾಗುತ್ತಿದ್ದವು. ಇವರುಗಳಿಗಾಗಿ ಅನಾಥಾಲಯವನ್ನು ಆರಂಭಿಸಿ ಅವರಿಗೆ ಶಿಕ್ಷಣ ನೀಡಿಸಿದರು. ಇದುವೇ ಈತನು ಸ್ಥಾಪಿಸಿದ ಮೊದಲ ಶಿಕ್ಷಣ ಕೆಂದ್ರ. ೧೮೧೫ ರಲ್ಲಿ ಧಾರ್ಮಿಕ ಕರಪತ್ರಗಳ ಸಂಘವನ್ನು ಸ್ಥಾಪಿಸಿದನು. ಅದೇ ವರ್ಷದಂದು ಪ್ರಥಮ ಕನ್ನಡ ಶಾಲೆಯನ್ನು ಆರಂಭಿಸಿದನು. ೧೮೧೬ ರಲ್ಲಿ ಪ್ರತಿಭಾವಂತರಿಗಾಗಿನ ವಿದ್ಯಾಭ್ಯಾಸಕ್ಕಾಗಿ ಉನ್ನತ ಮಟ್ಟದ 'ಕೇಂದ್ರ ಇಂಗ್ಲಿಷ್ ಶಾಲೆ' (Central English School)ಯನ್ನು ಆರಂಭಿಸಿದನು. ಯುರೋಪಿಯನ್ನರ ಮಕ್ಕಳಿಗಾಗಿ ಆರಂಭಿಸಿದ ಈ ಶಾಲೆಯಲ್ಲಿ ಸ್ಥಳೀಯ ಪ್ರತಿಭಾವಂತ ಮಕ್ಕಳಿಗೂ ಪ್ರವೇಶ ದೊರಕಿತು. ಮಿಷನ್ ಕೇಂದ್ರದ ಈ ಶಾಲೆಯನ್ನು ಜಾನ್‌ಸ್ಮಿತ್ ವಾರ್ಡಲಾರವರ ಅವಧಿಯಲ್ಲಿ ಪ್ರೌಢಶಾಲೆಯಾಗಿ ಉನ್ನತಿಗೊಳಿಸಲಾಯಿತು. ಮದ್ರಾಸ್ ಸರ್ಕಾರವು ೧೮೬೬ ರಲ್ಲಿ ಪ್ರಥಮ ಬಾಲಕಿಯರ ಶಾಲೆಯನ್ನು ಪ್ರಾರಂಭಿಸುವ ಮೊದಲು ೧೮೨೧ ರಲ್ಲಿ ಬಳ್ಳಾರಿಯ ಹ್ಯಾಂಡ್ಸ್ ಅವರು ಮಿಷನರಿ ಕೋಟೆ ಪ್ರದೇಶದಲ್ಲಿ ಬಾಲಕಿಯರಿಗಾಗಿ ಪ್ರತ್ಯೇಕ ಶಾಲೆಯನ್ನು ಆರಂಭಿಸಿದ್ದರು.[೫] ಹ್ಯಾಂಡ್ಸ್ ಅವರ ಭಾಷಾ ಅಧ್ಯಯನಕ್ಕೆ ಸಹಾಯ ಮಾಡಲೆಂದು ೧೮೧೬ ರಲ್ಲಿ ಬಂದ ವಿಲಿಯಂ ರೀವ್‌ನಿಗೆ ಅಗತ್ಯ ಸೌಲಭ್ಯಗಳನ್ನು ಕಲ್ಪಿಸಿದರು. ದಕ್ಷಿಣ ಭಾರತದಲ್ಲಿಯೇ ಪ್ರಥಮ 'ಸತ್ಯವೇದ ಸಂಘ' (ಬೈಬಲ್ ಸಂಘ)ವನ್ನು ೧೮೧೭ ರಲ್ಲಿ ಸಂಘಟಿಸಲಾಯಿತು. ಇದರ ಮುಖ್ಯ ಕೆಲಸ ಪ್ರತಿಗಳನ್ನು ತಯಾರು ಮಾಡುವುದು. ಅನುವಾದ, ಮುದ್ರಣ, ಹಂಚಿಕೆ ಮುಂತಾದವುಗಳನ್ನು ನೋಡಿಕೊಳ್ಳುವುದು. ಇಂದಿನ ವಾರ್ಡ್ಲಾ ಆವರಣದಲ್ಲಿ ೧೮೨೫ ರಲ್ಲಿ ಮುದ್ರಣ ಕೇಂದ್ರವನ್ನು ನಿರ್ಮಿಸಿದರು ೧೮೨೬ ರಲ್ಲಿ ಬಂದ ಮುದ್ರಣಯಂತ್ರವನ್ನು ಇಲ್ಲಿಯೇ ನೆಲೆಗೊಳಿಸಲಾಯಿತು.[೬] ಮುದ್ರಣಗೊಂಡ ಗ್ರಂಥಗಳ

ಕೆಲವು ಭಾಗಗಳನ್ನು ಸಾರ್ವಜನಿಕರು ಓದಲು ಅನುಕೂಲವಾಗಲೆಂದು ಸಾರ್ವಜನಿಕ ವಾಚನಾಲಯವನ್ನು ತೆರೆದನು. ನಂತರ ಇದನ್ನು ತೆರವಾಗಿ ಪಡೆಯುವ ವಾಚನಾಲಯವಾಗಿ ಪರಿವರ್ತಿಸಿದರು. ಹ್ಯಾಂಡ್ಸ್ ತಮ್ಮ ನಂತರ ಬಂದ ಲಂಡನ್ ಮಿಷನ್‌ನ ಅನೇಕ ಮಿಷನರಿಗಳಿಗೆ ಮಾರ್ಗದರ್ಶಕನಾದನು. ತಮ್ಮ ಉತ್ತರಾಧಿಕಾರಿಯಾಗಿ ಜಾನ್ ರೀಡ್‌ರನ್ನು ನೇಮಿಸಿ ೧೮೨೯ರಲ್ಲಿ ನಿವೃತ್ತಿ ಪಡೆದು ಸ್ವದೇಶಕ್ಕೆ ಮರಳಿದರು. ೧೮೩೨ ರಲ್ಲಿ ಮದ್ರಾಸ್ ವಿಭಾಗದ ಕಾರ್ಯದರ್ಶಿಯಾಗಿ ಆಗಮಿಸಿದ್ದರು. ಅನಂತರ ೧೮೩೮ ರಲ್ಲಿಯೂ ಒಮ್ಮೆ ಬೆಂಗಳೂರಿಗೆ ಆಗಮಿಸಿದ್ದುದಾಗಿ ತಿಳಿದು ಬರುತ್ತದೆ. ಕೊನೆಗೆ ೧೮೪೧ ರಲ್ಲಿ ಇಂಗ್ಲೆಂಡಿನಲ್ಲಿ ಜಾನ್ ಹ್ಯಾಂಡ್ಸರವರು ನಿಧನರಾದರು.

### ವಿಲಿಯಂ ರೀವ್

ಭಾಷಾ ಪರಿಣಿತನಲ್ಲದ ಹ್ಯಾಂಡ್ಸನ ಸಹಾಯಕ್ಕಾಗಿ ವಿಲಿಯಂ ರೀವ್‌ರನ್ನು ಲಂಡನ್ನಿಂದ ೧೮೧೬ ರಲ್ಲಿ ಬಳ್ಳಾರಿಗೆ ಕಳುಹಿಸಲಾಯಿತು. ಕೆಲ ವರ್ಷಗಳ ನಂತರ 'ಯೇಸುಕ್ರಿಸ್ತನ ಅವತಾರ' ಎಂಬ ಕೃತಿಯನ್ನು ರಚಿಸಿದನು.[೨] ಹ್ಯಾಂಡ್ಸನು ರಚಿಸಿದ ಶಬ್ದಕೋಶದ ಅಧ್ಯಯನ ನಡೆಸಿ, ಅದರಲ್ಲಿ ಇದ್ದ ಹಲವಾರು ದೋಷಗಳನ್ನು ತಿದ್ದಿದನು. ಈ ಕಾರ್ಯ ಪೂರ್ಣಗೊಂಡ ನಂತರ ತನ್ನದೇ ಪ್ರತ್ಯೇಕ ಇಂಗ್ಲಿಷ್ ಶಬ್ದಕೋಶ ರಚನೆಯಲ್ಲಿ ತೊಡಗಿದನು. ಸಾಮ್ಯತೆ ಇರುವ ಭಾಷೆಗಳ ಕೋಶವನ್ನು ರಚಿಸುವುದು ಕಠಿಣವಲ್ಲ, ಆದರೆ ಸಂಪೂರ್ಣ ಬದಲಾದ, ಉಚ್ಛರಿಸಲು ಸ್ವಲ್ಪ ಕಷ್ಟವಾಗುವ ಕನ್ನಡ ಶಬ್ದಗಳನ್ನು ಇಂಗ್ಲಿಷಿಗೆ ಅನ್ವಯಿಸಿ ಕೋಶ ರಚಿಸುವುದು ಬಹಳ ಕಷ್ಟದ ಕೆಲಸ. ತೀವ್ರ ಪರಿಶ್ರಮದ ನಂತರ ೧೮೨೪ಕ್ಕೆ ಇಂಗ್ಲಿಷ್-ಕನ್ನಡ ಕೋಶವನ್ನು ಸಿದ್ದಪಡಿಸಿದನು. ಅದೂ ಸಹ ಇಂಗ್ಲಿಷಿನ ಒಂದು ಶಬ್ದಕ್ಕೆ ಕನ್ನಡ ಎರಡು-ಮೂರು ಶಬ್ದಗಳಲ್ಲಿ ಅರ್ಥೈಸಿದ್ದಾನೆ. ಈ ಕೋಶವು ಮುಂದಿನ ದಿನಮಾನಗಳಲ್ಲಿ ಕನ್ನಡ ನಾಡಿಗೆ ಆಗಮಿಸಿದ ಮಿಷನರಿಗಳಿಗೆ ಮತ್ತು ಅವರ ಬೈಬಲ್ ಅನುವಾದ ಕಾರ್ಯಗಳಿಗೆ ಅನುಕೂಲವಾಯಿತು. ಬ್ರಿಟಿಷ್ ಆಡಳಿತಗಾರರಿಗೂ ಈ ಕೋಶವು ಅವಶ್ಯಕ ಎಂದರಿತ ಗವರ್ನರ್ ಥಾಮಸ್ ಮನ್ರೊ ಮುದ್ರಣಕ್ಕೆ ಪ್ರೋತ್ಸಾಹಿಸಿದರು. ಪರಿಣಾಮ ೧೮೨೬ ರಲ್ಲಿ ಮದ್ರಾಸಿನಲ್ಲಿ ಈ ಕೋಶವನ್ನು ಮುದ್ರಣಗೊಳಿಸಲಾಯಿತು.

ವಿಲಿಯಂ ರೀವ್ ಇಂಗ್ಲಿಷ್-ಕನ್ನಡ ಶಬ್ದಕೋಶ ರಚನೆಯು ಪೂರ್ಣಗೊಂಡ ನಂತರ ಕನ್ನಡ-ಇಂಗ್ಲಿಷ್ ಶಬ್ದಕೋಶ ರಚನಾ ಕಾರ್ಯವನ್ನು ಕೈಗೆತ್ತಿಕೊಂಡರು. ಇವರ ಈ ಕನ್ನಡ ಕಾರ್ಯಕ್ಕೆ ಸಹಾಯ ಮಾಡಿದವರು, ಮದ್ರಾಸಿನಲ್ಲಿ ನೆಲೆಸಿದ್ದ ಕೃಷ್ಣಮಾಚಾರಿ. ಕನ್ನಡ ಭಾಷೆಯು ಬಳ್ಳಾರಿ ಪ್ರದೇಶದಲ್ಲಿ ಉರ್ದು, ತೆಲುಗು, ತಮಿಳು, ಸಂಸ್ಕೃತ ಭಾಷೆಗಳೊಂದಿಗೆ ಬೆರೆತುಕೊಂಡಿತ್ತು. ಅಲ್ಲದೆ ಕನ್ನಡ ಭಾಷೆಯು ಕನ್ನಡ ನಾಡಿನಲ್ಲಿಯೇ ಪ್ರದೇಶವಾರು ಬೇಧ-ಭಿನ್ನತೆಗಳನ್ನು ಒಳಗೊಂಡಿದ್ದು ಅವುಗಳನ್ನು ಗುರುತಿಸಿ ಕನ್ನಡ ಶಬ್ದಗಳನ್ನು ಹೆಕ್ಕಿ ತೆಗೆಯುವುದು ಕಷ್ಟದ ಕೆಲಸವಾಗಿದ್ದಿತು. ರೀವ್‌ನಲ್ಲಿದ್ದ ಬಹುಭಾಷಾ ಗ್ರಹಣಶಕ್ತಿ, ಪರಿಶ್ರಮ ಪಡುವ ಗುಣ ಮತ್ತು ಸುಮಾರು ವರ್ಷಗಳ ತಾಳೆಗರಿಗಳ ಪರಿಶೀಲನೆಯಿಂದಾಗಿ ಕನ್ನಡ-ಇಂಗ್ಲಿಷ್ ಕೋಶ ಕಾರ್ಯವು ೧೮೩೨ ರಲ್ಲಿ ಪೂರ್ಣಗೊಂಡು ಅದೇ ವರ್ಷ ಮುದ್ರಣಗೊಂಡಿತು. ಮೊದಲ ಕೋಶ ರಚನೆಯಿಂದ ಅನುಭವಿಯಾದ ವಿಲಿಯಂ ರೀವ್ ಎರಡನೇ ಕೋಶವನ್ನು ಮೌಲಿಕವಾಗಿ ರಚಿಸಿದ್ದಾರೆ. ಆದರೂ ಇದರಲ್ಲಿ ತಪ್ಪುಗಳು ಇಲ್ಲದಿಲ್ಲ. ಸ್ಯಾಂಡರ್ಸನ್(೧೮೪೦-೭೦) ಎಂಬ ಮಿಷನರಿಯು ರೀವ್‌ನ ಕೋಶಗಳ ಅಧ್ಯಯನ ನಡೆಸಿ ಹಲವಾರು ದೋಷಗಳನ್ನು ತಿದ್ದಿ ಸರಿಪಡಿಸಿದನು.[೩] ಕನ್ನಡದ ಸುಧಾರಿತ ಮತ್ತು ಆಧುನಿಕ ಕೋಶ ರಚಿಸಿದ ಕಿಟೆಲ್(೧೮೯೪) ಸಹ ರೀವ್‌ನ ಕಾರ್ಯಗಳನ್ನೇ ಆಧಾರವಾಗಿಟ್ಟುಕೊಂಡು ಮುಂದುವರೆದಿದ್ದನು. ಹೀಗೆ ವಿಲಿಯಂ ರೀವ್ ಕೋಶ ರಚನಾಕಾರರಿಗೆ ಬುನಾದಿ ಹಾಕಿಕೊಟ್ಟಿದ್ದಾನೆ.

### ಜಾನ್ ರೀಡ್

ಕ್ರಿ.ಶ. ೧೮೩೦ ರಲ್ಲಿ ಹ್ಯಾಂಡ್ಸ್‌ರ ಉತ್ತರಾಧಿಕಾರಿಯಾಗಿ ಬಂದ ಜಾನ್ ರೀಡ್ ಮಿಷನ್ ಕೇಂದ್ರದ ನೇತೃತ್ವ ವಹಿಸಿದರು. ರೀಡ್ ಇಂಗ್ಲೆಂಡಿನಲ್ಲಿ ಇರುವಾಗಲೇ ಹ್ಯಾಂಡ್ಸ್‌ರೊಂದಿಗೆ ಪತ್ರಸಂಬಂಧವನ್ನು ಹೊಂದಿದ್ದನು.ಬಳ್ಳಾರಿ ಮಿಷನ್ ಕೇಂದ್ರಕ್ಕೆ ಬರುವುದು ಪೂರ್ವಯೋಜಿತವಾಗಿದ್ದುದರಿಂದ ಪತ್ರಗಳ ಮೂಲಕ ಕನ್ನಡ ಭಾಷೆಯನ್ನು ಕಲಿಯಲು ಆರಂಭಿಸಿದ್ದರು. ರೀಡ್ ಬಳ್ಳಾರಿಗೆ ಬಂದ ಕೆಲವೇ ತಿಂಗಳುಗಳಲ್ಲಿ ಕನ್ನಡ ಭಾಷಾ ಬಳಕೆಯಲ್ಲಿ ಪ್ರಗತಿ ಕಂಡರು. ಈಗಾಗಲೇ ಮುದ್ರಣ ಕಂಡಿದ್ದ ವಿಲಿಯಂ ರೀವ್‌ನ ಇಂಗ್ಲಿಷ್-ಕನ್ನಡ ಶಬ್ದಕೋಶವನ್ನು ಅಭ್ಯಸಿಸಿ ಅದೇ ಮಾದರಿಯಲ್ಲಿ ಸುಮಾರು ೫೦೦೦ ಕನ್ನಡ ಆಡು ಭಾಷೆಯಲ್ಲಿನ ಶಬ್ದಗಳನ್ನು ಸಂಗ್ರಹಿಸಿದ್ದರು. ೧೮೩೧ ರ ನಂತರ ರೀಡ್ ತಮ್ಮನ್ನು ಗ್ರಂಥೋದ್ಯಮದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು. ೧೮೩೫ ರ ಹೊತ್ತಿಗಾಗಲೆ ತೆಲುಗು ಭಾಷೆ ಬಲ್ಲವರಾಗಿದ್ದುದರಿಂದ ಇಂಗ್ಲಿಷಿನ ಕೃತಿಗಳು ಮತ್ತು ಪ್ರಾರ್ಥನೆಯ ಬೈಬಲ್‌ನ ಭಾಗಗಳನ್ನು ಕನ್ನಡಕ್ಕೆ, ನಂತರ ಕನ್ನಡದಿಂದ ತೆಲುಗು ಭಾಷೆಗೆ ಅನುವಾದಿಸಿ, ಮುದ್ರಣಗೊಳಿಸಿದರು. ೧೮೩೬ ರಲ್ಲಿ 'ಇಂಗ್ಲಿಷ್ ಭಾಷೆಯನ್ನು ಕಲಿಯುವುದಕ್ಕೆ ಸಹಾಯವು' ಎಂಬ ಬಹು ಉಪಯುಕ್ತ ಕೃತಿಯನ್ನು ಹೊರತಂದರು. ಈ ಕೃತಿಯು ವಿವಿಧ ಕ್ಷೇತ್ರಗಳ ವಿಷಯಗಳನ್ನು ಪಾಠಗಳ ರೀತಿಯಲ್ಲಿ, ಮೊದಲಿಗೆ ಇಂಗ್ಲಿಷ್ ಶಬ್ದ ನಂತರ ಅದರ ಕನ್ನಡ ಅರ್ಥವನ್ನು ನೀಡುತ್ತಾ, ಅದನ್ನು ವಾಕ್ಯವಾಗಿ ರಚಿಸಿ ಮಾದರಿಗಳಾಗಿ ನೀಡಿತು. ಭಾಷಾ ಆದ್ಯತೆಯ ಕೃತಿಯಲ್ಲೂ ಕ್ರೈಸ್ತ ಮತ ಪ್ರಸಾರದ ಯತ್ನಗಳನ್ನು ತೋರಿದ್ದಾರೆ. ೧೮೪೦ ರ ಸುಮಾರಿಗೆ ಲಂಡನ್ ಮಿಷನ್ ಸೊಸೈಟಿಯ ವರಿಷ್ಠರಿಗೆ ಬೆಂಗಳೂರು ಕೇಂದ್ರದ ಕಡೆಗೆ ಒಲವು ಬೆಳೆಯಿತು. ಜಾನ್ ರೀಡ್‌ರಿಗೂ ಬೆಂಗಳೂರಿಗೆ ಬರುವಂತೆ ಆಹ್ವಾನ ಬಂದಿತು. ಬಳ್ಳಾರಿ ಕೇಂದ್ರದಲ್ಲಿ ಕೃತಿಗಳ ಅನುವಾದ ಮತ್ತು ಮುದ್ರಣ ಕಾರ್ಯಗಳಲ್ಲಿ ಆಸಕ್ತನಾಗಿದ್ದ ರೀಡ್ ಬಳ್ಳಾರಿ ಬಿಟ್ಟು ಬರಲು ಇಚ್ಛಿಸದೆ ಆಹ್ವಾನವನ್ನು ತಿರಸ್ಕರಿಸಿದರು. ಕರಳು ಬೇನೆಯಿಂದ ಬಳಲುತ್ತಿದ್ದ ರೀಡ್‌ರಿಗ ಬಳ್ಳಾರಿ ಬಿಸಿಲ ವಾತಾವರಣದಿಂದ ಮತ್ತಷ್ಟು ಉಲ್ಬಣಿಸಿದಂತಾಗಿ ೧೮೪೧ ರ ಜನವರಿ ತಿಂಗಳಲ್ಲಿ ಬಳ್ಳಾರಿಯಲ್ಲಿಯೇ ಅಸುನೀಗಿದರು.

### ಜಾನ್ ಸ್ಮಿತ್ ವಾರ್ಡ್‌ಲಾ

ರೀಡ್‌ನಿಂದ ತೆರವಾದ ಬಳ್ಳಾರಿ ಮಿಷನ್ ಕೇಂದ್ರದ ಮುಖ್ಯ ಮಿಷನರಿ ಸ್ಥಾನಕ್ಕೆ ವಾರ್ಡ್‌ಲಾ ರವರು ೧೮೪೨ ಅಕ್ಟೋಬರ್ ೨೮ ರಂದು ಬಂದರು. ಬಳ್ಳಾರಿಯಲ್ಲಿ ಶಿಕ್ಷಣ ಕ್ರಾಂತಿಗೆ ಕರ್ತೃವಾದರು. ಕಲ್ಕತ್ತ, ಮುಂಬೈ, ಮದ್ರಾಸ್‌ಗಳಲ್ಲಿ ಮಾತ್ರ ಪ್ರೌಢಶಾಲೆಗಳು ಇದ್ದಂತಹ ಅವಧಿಯಲ್ಲಿ ವಾರ್ಡ್‌ಲಾ ರವರು ಬಳ್ಳಾರಿಯ ಮಿಷನ್ ತೋಟದಲ್ಲಿ ಸುಮಾರು ೨೯೫೦ ರೂಪಾಯಿಗಳ ವೆಚ್ಚದಲ್ಲಿ ನೂತನ ಕಟ್ಟಡವನ್ನು ನಿರ್ಮಿಸಿ, ೧೮೪೬ ಆಗಸ್ಟ್ ೨೮ ರಂದು ಪೌಢಶಾಲೆಯನ್ನು ತೆರೆಯಲಾಯಿತು.[೬] ಈ ಶಾಲೆಯು ೧೮೧೬ ರಲ್ಲಿ ಜಾನ್ ಹ್ಯಾಂಡ್ಸ್‌ರಿಂದ ಆರಂಭವಾಗಿದ್ದ 'ಕೇಂದ್ರೀಯ ಇಂಗ್ಲಿಷ್ ಶಾಲೆ'ಯ ಉನ್ನತ ಹಂತವಾಯಿತು. ೧೮೪೮ ರಲ್ಲಿ ಬಳ್ಳಾರಿ ನಗರದ ಸತ್ಯನಾರಾಯಣ ಪೇಟೆಯಲ್ಲಿ ಬಾಲಕಿಯರಿಗಾಗಿ 'ಲಂಡನ್ ಮಿಷನ್ ಆಂಗ್ಲೋ ವರ್ನಾಕುಲರ್ ಬಾಲಕಿಯರ ಶಾಲೆ'ಯನ್ನು ಆರಂಭಿಸಿದರು. ಇವೆರಡು ಶಾಲೆಗಳು ಇಂದಿಗೂ ಅಸ್ತಿತ್ವದಲ್ಲಿದ್ದು ಶೈಕ್ಷಣಿಕ ಸೇವೆಯಲ್ಲಿ ತೊಡಗಿವೆ. ವಾರ್ಡ್‌ಲಾ ಶಿಕ್ಷಣ ಕೇಂದ್ರವು ಪ್ರೌಢಶಾಲೆ ಮತ್ತು ಪದವಿ ಪೂರ್ವ ಕಾಲೇಜಾಗಿ ಕಾರ್ಯ ನಿರ್ವಹಿಸುತ್ತಿದೆ. ಜಾನ್ ಸ್ಮಿತ್ ವಾರ್ಡ್‌ಲಾ ರವರ ಅವಧಿಯಲ್ಲಿಯೇ ಬಳ್ಳಾರಿ ಮುದ್ರಣ ಕೇಂದ್ರದಿಂದ ಕನ್ನಡ ಸಮಾಚಾರ ಪತ್ರಿಕೆಯು ಪ್ರಕಟ ಕಾಣುತ್ತಿತ್ತು. ೧೮೫೫ ರಲ್ಲಿ ರೆ. ಥಾಮಸ್ ಹೈನ್ಸರಿಗೆ ಅಧಿಕಾರ ವಹಿಸಿ ಸ್ವದೇಶಕ್ಕೆ ಮರಳಿದರು.

### ರೆ. ಥಾಮಸ್ ಹೈನ್ಸ್

ಮಿಷನ್ ಕೇಂದ್ರದಲ್ಲ ಕೆಲಸ ಮಾಡುತ್ತಿದ್ದವರಿಗಾಗಿ ಹತ್ತು ಮನೆಗಳನ್ನು ನಿರ್ಮಿಸಿಕೊಟ್ಟರು. ೧೮೧೬ ರಲ್ಲಿ ಲಂಡನ್ ಮಿಷನ್ ತೆಲುಗು ಚರ್ಚನ್ನು ಕೌಲ್‌ಬಜಾರಿನಲ್ಲಿ ಇಂದಿನ ಸೆಲೆಕ್ಟ್ ವಿವಾಹ ಮಂದಿರ ಪಕ್ಕ ನಿರ್ಮಿಸಿದರು.

೧೮೫೪ ರಲ್ಲಿ ಮುದ್ರಣ ಕೇಂದ್ರ ಮುಚ್ಚಲಾಗಿದ್ದಿತು. ಆ ಕಾರಣ ಈ ಮಿಷನರಿಗಳು ಧರ್ಮ ಪ್ರಸಾರ ಕಾರ್ಯದಲ್ಲಿ ಹೆಚ್ಚು ತೊಡಗಿಸಿಕೊಳ್ಳಲು ಸಾಧ್ಯವಾಯಿತು. ಹೈನ್ಸ್‌ರವರು ಸುಮಾರು ಇಪ್ಪತ್ತೊಂದು ವರ್ಷಗಳ ಸೇವೆಯ ನಂತರ ನಿವೃತ್ತಿ ಹೊಂದಿದರು.

### ರೆ. ಸಿ. ಬಿ. ಫಿಂಟೊ

೧೮೭೬ ರಲ್ಲಿ ಮಿಷನ್ ಕೇಂದ್ರಕ್ಕೆ ಆಗಮಿಸಿದ ಫಿಂಟೊ ತಮ್ಮ ಎಂಟು ವರ್ಷಗಳ ಸೇವೆಯಲ್ಲಿ ಎರಡು ಚರ್ಚ್‌ಗಳನ್ನು ನಿರ್ಮಿಸಿದರು. ಒಂದು ಕೌಲ್‌ಬಜಾರ್‌ನಲ್ಲಿ ಲಂಡನ್ ಮಿಷನ್ ಚರ್ಚ್, ಮತ್ತೊಂದು ನಗರದ ಕೋಟೆ ಪ್ರದೇಶದಲ್ಲಿ ಇಂಗ್ಲಿಷ್ ಕಾಂಗ್ರಿಗೇಷನಲ್ ಚರ್ಚ್. ಇಷ್ಟೆ ಅಲ್ಲದೆ ಪಾರ್ವತಿ ನಗರದಲ್ಲಿ ಮಿಷನರಿಗಳಿಗಾಗಿ ಮನೆಗಳನ್ನು ನಿರ್ಮಿಸಿದರು.

### ರೆ. ಎಫ್. ಹೆಚ್. ಬ್ರೌನ್

೧೮೮೬ ರಲ್ಲಿ ಕಾರ್ಯಾರಂಭಿಸಿದ ಬ್ರೌನ್‌ರವರು ಬಳ್ಳಾರಿಯಲ್ಲಿ ಸುಮಾರು ೧೫ ವರ್ಷಗಳ ಸೇವೆ ಸಲ್ಲಿಸಿದ್ದಾರೆ. ಬಳ್ಳಾರಿ ನಗರದಲ್ಲಿ ಮಾತ್ರವಲ್ಲದೆ ಜಿಲ್ಲೆಯ ಇತರ ಕೇಂದ್ರಗಳಿಗೂ ಮಿಷನ್ ಕಾರ್ಯಗಳನ್ನು ವಿಸ್ತರಿಸಿದರು. ಮೊದಲ ವರ್ಷದಲ್ಲಿಯೇ ಬಳ್ಳಾರಿಯ ಸಂಡೂರು ಪ್ರದೇಶದಲ್ಲಿ ಸುಮಾರು ೨೫೦೦ ರೂ ವೆಚ್ಚದಲ್ಲಿ ಒಂದು ಚರ್ಚನ್ನು ಮತ್ತು ಮಿಷನರಿಗಳಿಗಾಗಿ ಒಂದು ತಂಗುದಾಣವನ್ನು ನಿರ್ಮಿಸಿದರು. ಬಳ್ಳಾರಿಯಿಂದ ಸಂಡೂರಿಗೆ ಹೋಗುವ ಮಾರ್ಗ ಮಧ್ಯದ ಕುಡುತಿನಿಯಲ್ಲಿ ಸಾರ್ವಜನಿಕರ ಒತ್ತಾಯದ ಮೇರೆಗೆ ಸ್ಥಳೀಯರು ನೀಡಿದ ಎಂಟು ಎಕರೆ ಪ್ರದೇಶದಲ್ಲಿ ಪಾದ್ರಿಯೊಬ್ಬರ ನಿವಾಸ ಸಹಿತ ಚರ್ಚನ್ನು ನಿರ್ಮಿಸಿದರು. ಇದು ನಂತರ ಶಾಲೆಯಾಗಿಯೂ ಬಳಕೆಯಾಯಿತು. ಇಂದಿನ ಸತ್ಯನಾರಾಯಣ ಪೇಟೆಯಲ್ಲಿರುವ ಸಿ. ಎಸ್. ಐ. ಬಾಲಕಿಯರ ವಸತಿನಿಲಯವು ಮೂಲವಾಗಿ ಬ್ರೌನ್‌ರವರು ೧೮೯೨ ರಲ್ಲಿ ನಿರ್ಮಿಸಿದಂತಹದ್ದು. ವಾರ್ಡಲಾ ಶಾಲಾ ಆವರಣದಲ್ಲಿದ್ದ ಅನಾಥ ಬಾಲಕರ ವಸತಿ ನಿಲಯವನ್ನು ೧೮೯೬ ರಲ್ಲಿ ಪಾರ್ವತಿ ನಗರದ ಮಿಷನರಿ ನಿವಾಸದ ಬಳಿಗೆ ವರ್ಗಾಯಿಸಲಾಯಿತು. ಈ ಮೊದಲು ಇವರಿಂದ ಸ್ಥಾಪನೆಯಾದ ಸಂಡೂರು ಕೇಂದ್ರದಲ್ಲಿ ೧೮೯೮ ರಲ್ಲಿ ಲಂಡನ್ ಮಿಷನ್ ಸೊಸೈಟಿ ಬಾಲಕಿಯರ ಶಾಲೆಯನ್ನು ಆರಂಭಿಸಿದರು. ಮಿಷನ್ ಕಾರ್ಯಗಳು ಬಳ್ಳಾರಿಯಲ್ಲಿ ವಿಸ್ತಾರಗೊಳ್ಳಲು ಕಾರಣರಾದ ಬ್ರೌನ್‌ರವರು ೧೯ನೇ ಶತಮಾನದ ಅಂಚಿನ ವರ್ಷದಲ್ಲಿ ನಿವೃತ್ತಿಹೊಂದಿದರು.

### ಕೆ. ಎ. ಸೆಬಾಸ್ಟಿಯನ್

ಬ್ರೌನ್‌ರವರು ೧೮೯೯ ರಲ್ಲಿ ನಿವೃತ್ತಿ ಹೊಂದಿದ ನಂತರ ಅಧಿಕಾರವಹಿಸಿಕೊಂಡ ಸೆಬಾಸ್ಟಿಯನ್‌ರು ಸುಮಾರು ಹದಿನೈದು ವರ್ಷಗಳ ಸೇವೆ ನೀಡಿದ್ದಾರೆ. ಈ ಮಧ್ಯೆ ಬಳ್ಳಾರಿ ನಗರದಲ್ಲೊಂದು ಹಾಲ್ ಸೋಲ್ಸ್ ಚರ್ಚನ್ನು ಮತ್ತು ಮುರವೇಣಿ ಗ್ರಾಮದಲ್ಲಿ ಲಂಡನ್ ಮಿಷನ್ ಚರ್ಚನ್ನು ಸ್ಥಾಪಿಸಿದ್ದರು.

### ಚರ್ಚ್ ಆಫ್ ಸೌತ್ ಇಂಡಿಯಾ ಐಕ್ಯಸಭೆ – (ಸಿ. ಎಸ್. ಐ.)

ದಕ್ಷಿಣ ಭಾರತದಲ್ಲಿ ಕಾರ್ಯನಿರ್ವಹಿಸುತ್ತಿದ್ದ ವಿದೇಶಿ ಪ್ರಾಟೆಸ್ಟೆಂಟ್ ಮಿಷನ್‌ಗಳು ಭಾರತೀಯ ಯಾಜಕರಿಗೆ ಒಪ್ಪಿತವಾಗಿ, ಹಲವಾರು ಮಿಷನ್‌ಗಳು ಒಂದು ಗೂಡಿ ೨೭ ಸೆಪ್ಟೆಂಬರ್ ೧೯೪೮ ರಂದು ಅಸ್ತಿತ್ವಕ್ಕೆ ಬಂದಿತು. ಆರಂಭದಲ್ಲಿ ಕೆಲವೇ ಮಿಷನ್‌ಗಳು ಐಕ್ಯ ಹೊಂದಿದ್ದವು. ಕಾಲ ಕಳೆದಂತೆ ಒಂದೊಂದಾಗಿ ಮಿಷನ್‌ಗಳು ಸ್ವತಂತ್ರ ನಿರ್ವಹಣಾ ಶಕ್ತಿ ಕಳೆದುಕೊಂಡಂತೆ ಈ ಸಭೆಯಲ್ಲಿ ಐಕ್ಯಹೊಂದಿದವು. ಬಳ್ಳಾರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಲಂಡನ್ ಮಿಷನ್ ೧೯೬೦ ರಲ್ಲಿ ರೆ. ಸಿ. ಬಿ. ಫರ್ತ್‌ರವರ ನೇತೃತ್ವದಲ್ಲಿ ಚರ್ಚ್ ಆಫ್ ಸೌತ್ ಇಂಡಿಯಾ ಸಭೆಯಲ್ಲಿ ವಿಲೀನವಾಯಿತು. ಇಲ್ಲಿಂದ ಮುಂದುವರೆದಂತೆ ಭಾರತೀಯ ಯಾಜಕರು ಸಿ. ಎಸ್. ಐ. ನ ಮಾರ್ಗದರ್ಶನದಂತೆ ಬಳ್ಳಾರಿಯಲ್ಲಿ ಲಂಡನ್ ಮಿಷನ್ ಕಾರ್ಯಗಳನ್ನು ಮುಂದುವರೆಸಿಕೊಂಡು ಸಾಗಿದ್ದಾರೆ.

ರೆ. ಎನ್. ಸಭಾಪತಿ, ರೆ. ಎ. ಚಿದಾನಂದಪ್ಪ, ರೆ. ಕೆ. ಬಿ. ಅಬ್ರಹಾಂ, ರೆ. ಡಿ. ಇಸಾಕ್ ಮ್ಯಾಥ್ಯೂ, ರೆ. ಜೆ. ಪಿ. ಕನ್ನೆನ್, ರೆ. ಬಿ. ಆರ್. ಸವದ ಹೀಗೆ ಹಲವರು ಸಿ. ಎಸ್. ಐ. ಕಾರ್ಯಗಳನ್ನು ಬಳ್ಳಾರಿಯಲ್ಲಿ ನಿರ್ವಹಿಸುತ್ತಿದ್ದಾರೆ.

## ಬಾಸೆಲ್ ಮಿಷನ್

ಬಾಸೆಲ್ ಮಿಷನ್ ೧೮೧೫ ರಲ್ಲಿ 'ಇವ್ಯಾಂಜಲಿಕಲ್ ಮಿಷನರಿ ಆಫ್ ಸೊಸೈಟಿ ಆಫ್ ಬಾಸೆಲ್' ಎಂಬ ಹೆಸರಿನೊಂದಿಗೆ ಸ್ವಿಜ್ಜರ್‌ಲ್ಯಾಂಡ್‌ನಲ್ಲಿ ಸ್ಥಾಪನೆಯಾಯಿತು. ಜರ್ಮನಿ ಮೂಲದ ಮಿಷನರಿ ಸಾಮ್ಯುವೆಲ್ ಹೆಬಿಕ್ ಅವರು ಸೇರಿದಂತೆ ಒಟ್ಟು ಮೂವರು ಮಿಷನರಿಗಳು ೩೦, ಅಕ್ಟೋಬರ್, ೧೮೩೪ ರಲ್ಲಿ ಮಲಬಾರ್ ಕರಾವಳಿಗೆ ಬಂದಿಳಿದು ಮಂಗಳೂರಿನಿಂದ ಕಾರ್ಯಾರಂಭಿಸಿದರು.[೧೦] ನಂತರ ದಕ್ಷಿಣ ಕನ್ನಡ ಜಿಲ್ಲೆಗೆ ಆಗಮಿಸಿ ಅಲ್ಲೊಂದು ಕೇಂದ್ರವನ್ನು ತೆರೆದರು. ೧೮೩೮ ರಲ್ಲಿ ಮಂಗಳೂರಿನಲ್ಲಿ ಪ್ರಥಮ ಶಾಲೆಯೊಂದನ್ನು ಆರಂಭಿಸಿದರು. ಧರ್ಮ ಪ್ರಸಾರ ಕಾರ್ಯದ ಜೊತೆಗೆ ಶಿಕ್ಷಣ, ಮುದ್ರಣ ಮತ್ತು ಜನರಿಗೆ ಜೀವನೋಪಾಯದ ಕೆಲಸಗಳನ್ನು ಕಲಿಸುವ ಕೇಂದ್ರಗಳನ್ನು ತೆರೆದರು. ಹೆಂಚಿನ ಉತ್ಪಾದನೆ ಮತ್ತು ಹತ್ತಿಯ ಗಿರಣಿಗಳು ಇವರ ಅವಧಿಯ ಕೈಗಾರಿಕಾ ಬೆಳವಣಿಗೆ. ೧೮೪೩ ರಲ್ಲಿ ಬಾಸೆಲ್ ಮಿಷನರಿ ಹರ್ಮನ್ ಮೋಗ್ಲಿಂಗ್ 'ಮಂಗಳೂರು ಸಮಾಚಾರ' ಎಂಬ ಪ್ರಥಮ ಕನ್ನಡ ಪತ್ರಿಕೆಯನ್ನು ಹೊರ ತಂದರು.[೧೧] ಮಂಗಳೂರಿನ ಈ ಮುದ್ರಣ ಕೇಂದ್ರವು ಹಲವಾರು ಪುರಾತನ ಕನ್ನಡ ಕೃತಿಗಳನ್ನು ಮುದ್ರಿಸಿತು. ಮಂಗಳೂರು ಮಾತ್ರವಲ್ಲದೆ ಈ ಮಿಷನ್ ಉತ್ತರ ಕನ್ನಡ, ಧಾರವಾಡ, ಬಿಜಾಪುರ, ಬಳ್ಳಾರಿಯಲ್ಲಿ ಕಾರ್ಯನಿರ್ವಹಿಸಿದೆ.

## ಹರ್ಮನ್ ಮೋಗ್ಲಿಂಗ್ (೧೮೩೬-೧೮೬೦)

ಮೋಗ್ಲಿಂಗ್ ಮಿಷನರಿ ಮೂಲಕ ಬಾಸೆಲ್ ಮಿಷನ್‌ನ ಚಟುವಟಿಕೆಗಳು ಬಳ್ಳಾರಿಗೂ ಹರಡಿತು. ಈತನು ಮಂಗಳೂರಿನ ಮುದ್ರಣ ಕೇಂದ್ರದಿಂದ ಹೊರಡಿಸಿದ ಕನ್ನಡದ ಮೊದಲ ಪತ್ರಿಕೆ ಮಂಗಳೂರು ಸಮಾಚಾರ ಪತ್ರಿಕೆಯು ಪ್ರೋತ್ಸಾಹದ ಕೊರತೆ ಎದುರಿಸಬೇಕಾಯಿತು. ಅವಶ್ಯಕ ಮಾಹಿತಿ ವರದಿಯನ್ನು ಒಳಗೊಂಡಿರುತ್ತಿದ್ದ ಈ ಪತ್ರಿಕೆಯು ನಾಡಿನೆಲ್ಲೆಲ್ಲಾ ಪ್ರಚಾರ ಕಾಣಬೇಕೆಂದು ಮೋಗ್ಲಿಂಗ್ ಬಯಸಿದ್ದನು. ಬಳ್ಳಾರಿಯಲ್ಲಿ ಜಾನ್ ರೀಡ್ ಯಶಸ್ವಿಯಾಗಿ ಮುದ್ರಣ ಕಾರ್ಯದಲ್ಲಿ ತೊಡಗಿದ್ದು, ೧೮೩೭ ರಲ್ಲಿ ಬಳ್ಳಾರಿಗೆ ತರಿಸಲಾದ ಆಧುನಿಕ ಕಬ್ಬಿಣದ ಅಚ್ಚುವುಳ್ಳ ಮುದ್ರಣ ಕೇಂದ್ರದಲ್ಲಿ ಮುದ್ರಿಸಿದರೆ ಪತ್ರಿಕೆಯು ಅಂದವಾಗಿ ಕಾಣುವುದು ಎಂದು ಮೋಗ್ಲಿಂಗ್ ಬಳ್ಳಾರಿ ಮಿಷನ್ ಕೇಂದ್ರದವರೊಂದಿಗೆ ಚರ್ಚಿಸಿ 'ಮಂಗಳೂರು ಸಮಾಚಾರ' ಪತ್ರಿಕೆಯನ್ನು ಬಳ್ಳಾರಿಗೆ ವರ್ಗಾಯಿಸಲಾಯಿತು. ಬಳ್ಳಾರಿಯಲ್ಲಿ ೧೮೪೪ ಮಾರ್ಚ್ ತಿಂಗಳಲ್ಲಿ 'ಕಂನಡ ಸಮಾಚಾರ' ಎಂಬ ಹೊಸ ನಾಮದೊಂದಿಗೆ ಪ್ರಕಟಗೊಂಡಿತು. ಈ ಕನ್ನಡ ಪತ್ರಿಕೆಯು ಮೊಳೆಯಚ್ಚಿನಲ್ಲಿ ಮುದ್ರಣ ಕಂಡ ಮೊದಲ ಪತ್ರಿಕೆ ಎಂಬ ಖ್ಯಾತಿ ಹೊಂದಿದೆ. ಮೋಗ್ಲಿಂಗ್ ಬಳ್ಳಾರಿಯುಲ್ಲಿ ನೆಲೆಸದೆ ಮಂಗಳೂರಿನಲ್ಲಿ ಇದ್ದುಕೊಂಡು ವರದಿಗಳನ್ನು ಕಳುಹಿಸುತ್ತಿದ್ದನು. ಆದರೆ ಮುದ್ರಣ ಕೇಂದ್ರದಲ್ಲಿ ಸೂಕ್ತ ನಿರ್ವಹಣಾಕಾರರು ಇರಲಿಲ್ಲವಾದ್ದರಿಂದ ೧೮೪೪ ರ ವರ್ಷದ ಕೊನೆಯಲ್ಲಿ ಪತ್ರಿಕೆಯು ರದ್ದಾಯಿತು. ಮೋಗ್ಲಿಂಗನು ಹೀಗೆ ಬಳ್ಳಾರಿಯಲ್ಲಿ ಪತ್ರಿಕೆಯು ಪ್ರಕಟ ಕಾಣಲು ಕಾರಣನಾದನು.

ಈ ಬಾಸೆಲ್ ಮಿಷನ್‌ನ ಜಿ. ವೈಗಲ್, ಪುರ್ತ್, ಕಿಟೆಲ್ ಇವರು ಕನ್ನಡ ಕಾರ್ಯದಲ್ಲಿ ಅಪಾರವಾಗಿ ದುಡಿದಿದ್ದಾರೆ. ಆದರೆ ಅವರ ಕಾರ್ಯಕ್ಷೇತ್ರ ಬಳ್ಳಾರಿ ಆಗಿರಲಿಲ್ಲ.

## ಕ್ಯಾಥೋಲಿಕ್ ಮಿಷನರಿಗಳು

ಜಾಗತಿಕ ಧರ್ಮಗುರು ಪೋಪ್‌ರ ಸೂಚನೆಯಂತೆ ಪ್ರಪಂಚದ ಮೂಲೆ ಮೂಲೆಗಳಲ್ಲಿ ಕ್ಯಾಥೋಲಿಕ್ ಧರ್ಮಸಭೆ ಮಿಷನ್‌ಗಳು ಪ್ರಾದೇಶಿಕವಾಗಿ ಹಂಚಲ್ಪಟ್ಟಿವೆ. ನಿಗದಿತ ಧರ್ಮಕ್ಷೇತ್ರದಲ್ಲಿ ಆಯಾ ಧರ್ಮಸಭೆಗಳು ಸ್ಥಳೀಯ

ಕ್ಯಾಥೋಲಿಕರ ಆಧ್ಯಾತ್ಮಿಕ ಸೇವೆಯಲ್ಲಿ ತೊಡಗಿವೆ. ಹೆಚ್ಚಿನ ಈ ಸಭೆಗಳು ವಿದೇಶದಿಂದ ಆಗಮಿಸಿದವುಗಳು. ಕೆಲವು ಮಾತ್ರ ಭಾರತದಲ್ಲಿ ಸ್ಥಾಪನೆಯಾದಂತಹವುಗಳು. ಯೇಸುಸಭೆ ಆ ರೀತಿಯಾಗಿ ಆಗಮಿಸಿದ ಮೊದಲ ಧರ್ಮಸಭೆ. ಇದು ೧೭ನೇ ಶತಮಾನದಲ್ಲಿ ಕರ್ನಾಟಕದಲ್ಲಿ ನೆಲೆಗೊಳ್ಳುವ ಪೂರ್ವದಲ್ಲಿ ಅಂದರೆ ೧೭೭೩ ರಲ್ಲಿ ಕೆಲವಾರು ಸಮಸ್ಯೆಗಳಿಂದಾಗಿ ಪೋಪ್ ಈ ಸಭೆಯನ್ನು ರದ್ದುಗೊಳಿಸಿದರು. ಆದರೂ ಜನಬೆಂಬಲದಿಂದ ಮೈಸೂರು, ಮಂಗಳೂರುಗಳಲ್ಲಿ ಉಳಿದ ಈ ಸಭೆಯ ಗುರುಗಳು ತಮ್ಮ ಕಾರ್ಯ ಮುಂದುವರೆಸಿದರು. ಈ ಸಭೆಯ ಕೆಲ ಗುರುಗಳು ೧೯೫೫ ಮತ್ತು ೧೯೭೯ ರಲ್ಲಿ ಬಳ್ಳಾರಿಗೂ ಭೇಟಿ ನೀಡಿದ್ದರು.

ಕ್ರಿ.ಶ. ೧೮೩೭ ರ ಸುಮಾರಿನಲ್ಲಿ ವಿಕಾರ್ ಕಪೋಸ್ಟಲಿಕ್ ಎಂಬ ಮದ್ರಾಸ್ ಮೂಲದ ಮಿಷನರಿ ಬಳ್ಳಾರಿ ಕ್ಯಾಥೋಲಿಕರ ಸೇವೆಗೆ ಬಂದನು. ಕೆಲಕಾಲ ಬಳ್ಳಾರಿ ಪ್ರದೇಶದಲ್ಲಿ ಸಂಚರಿಸಿ ಹಿಂದಿರುಗಿದನು.

ಫಾ. ಬಿ. ಡಿನನ್ ಮೊದಲಿಗೆ ಬಂದ ಮಿಷನರಿ. ಈತನ ನಂತರ ೧೮೪೦ ರಲ್ಲಿ ಬಂದ ಫಾ. ಪ್ಯಾಟ್ರಿಕ್ ದೊಯಲ್ ೧೮೭೭ ರ ವರೆಗೆ ಬಳ್ಳಾರಿಯಲ್ಲಿ ನೆಲೆಸಿ ಅಪೂರ್ವ ಸೇವೆ ಸಲ್ಲಿಸಿದ ಮೊದಲ ಕ್ಯಾಥೋಲಿಕ್ ಮಿಷನರಿ.

### ಫಾ. ಪ್ಯಾಟ್ರಿಕ್ ದೊಯಲ್

ಸಹಾಯಕರಾಗಿ ಬಂದ ಫಾ. ಅರೋಕೀಂದರ್ ಮತ್ತು ಫಾ. ಬಾಲಂದರ್ ಜೊತೆಗೂಡಿ ಹಲವಾರು ಯೋಜನೆಗಳನ್ನು ಜಾರಿಗೊಳಿಸಿದರು. ನಗರದ ಕೌಲ್‌ಬಜಾರ್ ಪ್ರದೇಶದಲ್ಲಿ ಭೂಮಿ ಪಡೆದು ಆ ಭಾಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದ ತಮಿಳು ಮೂಲದ ಸಂತ ಲಾಜರಸ್‌ನ ಭಕ್ತರ ಅನುಕೂಲಕ್ಕಾಗಿ ೧೮೬೩ ರಲ್ಲಿ 'ಸಂತ ಲಾಜರಸ್' ದೇವಾಲಯ ನಿರ್ಮಿಸಿದರು. ಇದುವೇ ನಂತರ ೧೯೩೬ ರಲ್ಲಿ 'ಸಂತ ಅಂತೋನಿಯವರ ದೇವಾಲಯ'ವಾಗಿ ಮಾರ್ಪಾಟಾಯಿತು.[೨] ಸ್ಥಳೀಯ ಕ್ಯಾಥೋಲಿಕರ ಧನಸಹಾಯದಿಂದ ಕಂಟೋನ್‌ಮೆಂಟ್ ಪ್ರದೇಶದಲ್ಲಿ ೧೮೫೯ ರಲ್ಲಿ ಭೂಮಿ ಕೊಂಡುಕೊಂಡರು. ಈ ಭೂಮಿಯಲ್ಲಿ ನಂತರ ೧೮೬೮ ರಲ್ಲಿ ಚರ್ಚನ್ನು ನಿರ್ಮಿಸಿದರು. ಇವರು ೧೮೫೬ ರ ಸುಮಾರಿನಲ್ಲಿ ಪ್ರಾರಂಭಿಸಿದ 'ಸಂತ ಜೋಸೆಫ್' ಎಂಬ ಶಾಲೆಯು ಬಳ್ಳಾರಿಯಲ್ಲಿ ಕ್ಯಾಥೋಲಿಕ್ ಶಿಕ್ಷಣ ಕೇಂದ್ರಗಳಲ್ಲಿ ಮೊದಲಿನದು. ೧೮೬೮ ರಲ್ಲಿ ಅನಾಥ ಮಕ್ಕಳಿಗಾಗಿ ವಸತಿ ಶಾಲೆಯನ್ನು ಆರಂಭಿಸಿದರು. ಈ ಮಕ್ಕಳ ನಿರ್ವಹಣೆ ಕನ್ಯಾ ಸಹೋದರಿಯರಿಂದ ಸುಲಭ ಸಾಧ್ಯ ಎಂದರಿತು ಗುಡ್ ಶಫರ್ಡ ಕನ್ಯಾ ಸಹೋದರಿಯರನ್ನು ಬಳ್ಳಾರಿಗೆ ಕರೆತರುವಲ್ಲಿ ಯಶಸ್ವಿಯಾದರು.

### ಗುಡ್ ಶಫರ್ಡ್ ಕನ್ಯಾಸಹೋದರಿಯರ ಸಭೆ

ವೆಲ್ಲೂರಿನಲ್ಲಿನ ಗುಡ್‌ಶಫರ್ಡ್ ಕನ್ಯಾಸಹೋದರಿಯರು ಅಲ್ಲಿಯ ಜನರು ಕಾಲರಾ ರೋಗಕ್ಕೆ ತುತ್ತಾಗಿ ಆ ಪ್ರದೇಶ ಬಿಟ್ಟು ಹೋಗುತ್ತಿದ್ದರು. ಅಲ್ಲದೆ ಬಳ್ಳಾರಿ ಕೇಂದ್ರದಿಂದ ಫಾ. ದೊಯಲ್‌ರವರು ಆಹ್ವಾನವನ್ನು ಕಳುಹಿಸಿದರು. ಈ ಎರಡು ಕಾರಣಗಳಿಗಾಗಿ ೧೮೭೫ ರಲ್ಲಿ ಬಳ್ಳಾರಿಗೆ ಆಗಮಿಸಿದ ಈ ಸಹೋದರಿಯರು ದೋಯಲ್‌ರ ಬಯಕೆಯಂತೆ ಕಂಟೋನ್‌ಮೆಂಟ್‌ನ ಅನಾಥಾಶ್ರಮದ ಹೊಣೆ ಹೊತ್ತರು. ಕೌಲ್‌ಬಜಾರಿನಲ್ಲೊಂದು ಅನಾಥಾಲಯವನ್ನು ತೆರೆದರು. ೧೮೭೯ ರಲ್ಲಿ ಈ ಎರಡು ಅನಾಥಾಲಯಗಳ ನಿರ್ವಹಣೆ ಕಷ್ಟವಾಯಿತು. ಆರ್ಥಿಕ ಕೊರತೆ ನೀಗಿಸಿಕೊಳ್ಳಲು ಸ್ಥಳೀಯ ಬ್ಯಾಂಕಿನಿಂದ ಸುಮಾರು ೧೦,೦೦೦ ರೂಪಾಯಿಗಳನ್ನು ಶೇಕಡ ೪ ರ ಬಡ್ಡಿದರದಲ್ಲಿ ಸಾಲಪಡೆದರು. ಈ ಹಣದಿಂದ ೧೮೮೫ ರಲ್ಲಿ ಕಂಟೋನ್‌ಮೆಂಟ್‌ನ ಚರ್ಚ್

ಬಳಿ ಸಂತ ಫಿಲೋಮಿನಾ ಶಾಲೆಯನ್ನು ಪ್ರಾರಂಭಿಸಿದರು.[೭೩] ೧೯೯೧ ರಲ್ಲಿ ಸರ್ಕಾರದ ಮಾನ್ಯತೆ ಪಡೆದು ನೂತನ ಕಟ್ಟಡ ನಿರ್ಮಿಸಲಾಯಿತು. ಇಂದಿಗೂ ಈ ಶಾಲೆ ಸಾವಿರಾರು ಮಕ್ಕಳಿಗೆ ವಿದ್ಯೆ ಒದಗಿಸುತ್ತಿದೆ. ಇದೇ ಕಂಟೋನ್‌ಮೆಂಟ್ ಕೇಂದ್ರದಲ್ಲಿ ವೃದ್ಧರಿಗಾಗಿ 'ಯುಪ್ರೇಸಿಯಾ ಹೋಂ ಫಾರ್ ಏಜ್ಡ್' ಎಂಬ ಗೃಹವನ್ನು ಕನ್ಯಾಸಹೋದರಿಯರು ನಡೆಸಿಕೊಂಡು ಬರುತ್ತಿದ್ದಾರೆ.

**ಸಿಸ್ಟರ್ ಆಫ್ ಅವರ್ ಲೇಡಿ ಆಫ್ ಫಾತಿಮಾ**

೧೮೭೫ ರಲ್ಲಿ ಬಳ್ಳಾರಿಗೆ ಆಗಮಿಸಿದ ಗುಡ್ ಶೆಫರ್ಡ್ ಸಹೋದರಿಯರು ನೀಡಿದ ಅನಾಥರಿಗಾಗಿನ ಸೇವೆಯನ್ನು ಕಂಡು ಫಾ. ಫ್ರಾನ್ಸಿಸ್ ಕ್ರೂಟ್ ಎಂಬ ಸೈನ್ಯ ಚಾಪ್ಲಿನ್‌ನಿಂದ ಪ್ರೇರಿತರಾದ ಕೌಲ್‌ಬಜಾರಿನ ಯುವತಿಯರು ಧರ್ಮ ದೀಕ್ಷೆ ಪಡೆದು ತಮ್ಮ ಆದ್ಯ ಗುರು ಫ್ರಾನ್ಸಿಸ್ ಝ್ಯುವಿಯರ್ ಹೆಸರಿನಲ್ಲಿ ಮಿಷನರೀಸ್ ಆಫ್ ಸಂತ ಫ್ರಾನ್ಸಿಸ್ ಝ್ಯುವಿಯರ್ ಎಂಬ ಸಭೆಯನ್ನು ಸ್ಥಾಪಿಸಿದರು. ನಂತರ ಕೌಲ್‌ಬಜಾರಿನಲ್ಲಿ ಅನಾಥಾಶ್ರಮ ಸ್ಥಾಪಿಸಿ ಸೇವೆ ಆರಂಭಿಸಿದರು. ಸ್ಥಳೀಯ ಸೂಕ್ತ ಸಹಕಾರ ದೊರೆಯದ ಕಾರಣ ೧೯೫೧ ರ ಜುಲೈ ತಿಂಗಳಲ್ಲಿ ಸಿಸ್ಟರ್ಸ್ ಆಫ್ ಅವರ್ ಲೇಡಿ ಫಾತಿಮಾ ಎಂಬ ಹೊಸ ನಾಮಕರಣ ಮಾಡಿ ಪೂನಾಕ್ಕೆ ತನ್ನ ಮುಖ್ಯ ಕೇಂದ್ರವನ್ನು ವರ್ಗಾಯಿಸಿತು.[೭೪] ಇಂದು ಕರ್ನಾಟಕದ ಮಂಗಳೂರಿನಲ್ಲಿ ಒಂದು ಉಪಕೇಂದ್ರವನ್ನು ಮತ್ತು ಬಳ್ಳಾರಿಯಲ್ಲಿ ಮೂರು ಉಪಕೇಂದ್ರಗಳನ್ನು ಹೊಂದಿದೆ. ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ ನಗರ, ಟಿ. ಬಿ. ಡ್ಯಾಂ ಗಳಲ್ಲಿ ಪ್ರಮುಖ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿವೆ. ಇವರ ನಿರ್ವಹಣಾ ಶಾಲೆಗಳು ಈ ಮುಂದಿನಂತಿವೆ.

ಬಳ್ಳಾರಿ ನಗರದ ಕೌಲ್‌ಬಜಾರಿನ ಸಂತ ಅಂತೋನಿಯವರ ಚರ್ಚ್‌ನ ಅಕ್ಕಪಕ್ಕದಲ್ಲಿ ಇರುವ ಬೃಹತ್ ಕಟ್ಟಡ ಸಮೂಹದಲ್ಲಿ ನಡೆಸಲ್ಪಡುತ್ತಿರುವ ಇವರ ಶಿಕ್ಷಣ ಕೇಂದ್ರಗಳು.

೧. ಸಂತ ಜೋಸೆಫ್‌ರ ಬಾಲಕಿಯರ ಪ್ರೌಢಶಾಲೆ – ಕನ್ನಡ

೨. ಸಂತ ಜೋಸೆಫ್‌ರ ಬಾಲಕಿಯರ ಪ್ರೌಢಶಾಲೆ – ಇಂಗ್ಲಿಷ್

೩. ಸಂತ ಜೋಸೆಫ್‌ರ ಬಾಲಕಿಯರ ಹಿ.ಪ್ರಾ.ಶಾಲೆ – ಕನ್ನಡ

೪. ಸಂತ ಜೋಸೆಫ್‌ರ ಬಾಲಕಿಯರ ಹಿ.ಪ್ರಾ.ಶಾಲೆ – ಇಂಗ್ಲಿಷ್

೫. ಸಂತ ಜೋಸೆಫ್‌ರ ಬಾಲಕರ ನರ್ಸರಿ ಶಾಲೆ – ಇಂಗ್ಲಿಷ್

೬. ಸಂತ ಜೋಸೆಫ್‌ರ ಬಾಲಕಿಯರ ಕಿಂಡರ್‌ಗಾರ್ಟನ್ – ಇಂಗ್ಲಿಷ್

ಟಿ.ಬಿ.ಡ್ಯಾಂನ ಇಂದಿರಾ ನಗರದಲ್ಲಿರುವ ಶಿಕ್ಷಣ ಕೇಂದ್ರಗಳು

೧. ಸಂತ ಜೋಸೆಫ್‌ರ ಪ್ರೌಢಶಾಲೆ – ಇಂಗ್ಲಿಷ್

೨. ಸಂತ ಜೋಸೆಫ್‌ರ ಹಿ.ಪ್ರಾ.ಶಾಲೆ – ಇಂಗ್ಲಿಷ್

೩. ಸಂತ ಜೋಸೆಫ್‌ರ ನರ್ಸರಿ ಶಾಲೆ – ಇಂಗ್ಲಿಷ್

**ಆರ್ಡರ್ ಆಫ್ ಫ್ರೈಯರ್ಸ್ ಮೈನರ್ (ಓ. ಎಫ್. ಎಂ)**

ಫ್ರಾನ್ಸಿಸ್ಕನ್ ಆರ್ಡರ್ ಎಂದೇ ಖ್ಯಾತವಾಗಿರುವ ಈ ಸಭೆಯು ಮೂಲವಾಗಿ ಕ್ರಿ.ಶ. ೧೨೦೯ ರಲ್ಲಿ ಸಂತ ಫ್ರಾನ್ಸಿಸ್‌ರವರಿಂದ ಇಟಲಿಯ ಅಸ್ಸಿಸಿ ಎಂಬಲ್ಲಿ ಸ್ಥಾಪನೆಯಾಯಿತು. ಫ್ರಾನ್ಸಿಸ್ಕನ್ ಸಭೆಯ ಇಂಗ್ಲಿಷ್ ಪ್ರಾವೆನ್ಸ್

ಭಾಗದ ಈ ಮಿಷನ್‌ನ ಮಿಷನರಿಗಳನ್ನು ಹೈದರಾಬಾದ್‌ನ ಸಭೆಯು ತಾನು ಸ್ಥಾಪಿಸಿದ್ದ ಇಂಗ್ಲಿಷ್ ಶಾಲೆಗಳನ್ನು ನೋಡಿಕೊಳ್ಳಲು ೧೯೨೫ ಜೂನ್ ೨೧ ರಂದು ಕರೆಯಿಸಲಾಯಿತು. ಈ ಸಭೆಯ ಫಾ. ಪೌಲ್, ಫಾ. ಗೆರಾಲ್ಡ್, ಫಾ. ಎರ್ನೆಸ್ಟ್ ಭಾರತಕ್ಕೆ ಬಂದ ಪ್ರಥಮರು.[೧೫] ೧೯೨೮ ರಲ್ಲಿ ಹೈದರಾಬಾದ್ ಧರ್ಮ ಪ್ರಾಂತ್ಯದಿಂದ ರಾಯಚೂರು, ಗುಲ್ಬರ್ಗಾಗಳನ್ನು ಪ್ರತ್ಯೇಕಿಸಿ, ಇತ್ತ ಮದ್ರಾಸ್-ಮೈಲಾಪುರ ಧರ್ಮಪ್ರಾಂತ್ಯದಿಂದ ಬಳ್ಳಾರಿಯನ್ನು ಪ್ರತ್ಯೇಕಿಸಿ ಒಂದು ಹೊಸ ಧರ್ಮಪ್ರಾಂತ್ಯವನ್ನು ರಚಿಸಲಾಯಿತು. ಇದುವೆ ಬಳ್ಳಾರಿ ಮಿಷನ್. ಈ ಧರ್ಮ ಪ್ರಾಂತ್ಯವನ್ನು ಓ. ಎಫ್. ಎಂ. ಸಭೆಯವರಿಗೆ ಪೋಪರು ಅಧಿಕೃತವಾಗಿ ಒಪ್ಪಿಸಿದರು. ರೆ. ಫಾ. ಎರ್ನೆಸ್ಟ್ ರೈಲಿಯವರು ಪ್ರಥಮ ಧರ್ಮಗುರುಗಳಾಗಿ ಬಂದರು. ಹೀಗೆ ಆರ್ಡರ್ ಆಫ್ ಫ್ರೈಯರ್ ಮೈನರ್ ಮಿಷನ್ ಬಳ್ಳಾರಿಗೆ ಬರುವಂತಾಯಿತು. ರೆ. ಫಾ. ಎರ್ನೆಸ್ಟ್ ರೈಲಿಯವರ ನಂತರ ರೆ. ಫಾ. ಮ್ಯಾಥ್ಯೂವಾಲೆಶ್ ಧರ್ಮಗುರುಗಳಾಗಿ ಸೇವೆ ಆರಂಭಿಸಿದರು. ಇವರು ಹದಿನಾಲ್ಕು ವರ್ಷಗಳ ಸೇವೆಯ ನಂತರ ನಿವೃತ್ತಿ ಹೊಂದಿದರು.

**ಜಾನ್ ಫಾರೆಸ್ಟ್ ಹೋಗನ್**

ಬಳ್ಳಾರಿ ಮಿಷನ್ ಪ್ರದೇಶದಲ್ಲಿ ಧರ್ಮಕಾರ್ಯಗಳು ಹೆಚ್ಚಿದರ ಪರಿಣಾಮ ಓ. ಎಫ್. ಎಂ. ಮಿಷನರಿಗಳು ಜಿಲ್ಲೆಯ ವಿವಿಧೆಡೆ ಕೇಂದ್ರಗಳನ್ನು ಸ್ಥಾಪಿಸಿ ಪ್ರಸಾರದಲ್ಲಿ ತೊಡಗಿತ್ತು. ಈ ಮಿಷನ್‌ಗೆ ಧರ್ಮ ಪ್ರಸಾರ ಮತ್ತು ಧರ್ಮ ಆಳ್ವಿಕೆಯ ಸ್ವಾತಂತ್ರ್ಯವನ್ನು ನೀಡಲು ನಿರ್ಧರಿಸಿ ಬಳ್ಳಾರಿ, ರಾಯಚೂರು, ಗುಲ್ಬರ್ಗಾಗಳನ್ನು ಒಳಗೊಂಡ ಪ್ರತ್ಯೇಕ ಧರ್ಮಕ್ಷೇತ್ರ ಎಂದು ೧೯೪೯ ರಲ್ಲಿ ಘೋಷಿಸಲಾಯಿತು. ಇದರ ಪ್ರಧಾನ ಕೇಂದ್ರ ಬಳ್ಳಾರಿ ನಗರ ಕಂಟೋನ್‌ಮೆಂಟ್ ಪ್ರದೇಶದಲ್ಲಿದೆ. ಜಾನ್. ಎಫ್. ಹೇಗನ್‌ರವರು ಬಳ್ಳಾರಿ ಧರ್ಮಕ್ಷೇತ್ರದ ಪ್ರಥಮ ಧರ್ಮಾದ್ಯಕ್ಷರಾಗಿ ೧೯೪೯ ರ ಮೇ ೦೪ ರಂದು ದೀಕ್ಷೆ ಪಡೆದರು. ಈ ಮೊದಲು ಭಾರತೀಯರು ಯಾಜಕರಾಗಲು ಅವಕಾಶ ಇಲ್ಲದ್ದನ್ನು ಕಂಡು ಭಾರತೀಯ ಮತಾಂತರಗೊಂಡ ಕ್ರೈಸ್ತರಿಗೆ ಯಾಜಕರಾಗಲು ತರಬೇತಿಯನ್ನು ಏರ್ಪಡಿಸಿದರು. ೧೯೬೨ ರಲ್ಲಿ ವ್ಯಾಟಿಕನ್ ಸಭೆಗೆ ಹೋಗುವ ಸಂದರ್ಭದಲ್ಲಿ ನಿಧನರಾದರು.

**ಅಂಬ್ರೋಜ್ ಎಡನಪಳ್ಳಿ**

ಇವರು ಧರ್ಮಗುರುಗಳಾಗಿ ಬಂದ ಪ್ರಥಮ ಭಾರತೀಯರು. ಹೋಗನ್‌ರವರು ಏರ್ಪಡಿಸಿದ್ದ ಯಾಜಕರ ತರಬೇತಿ ಕೇಂದ್ರದಲ್ಲಿ ಬೆಳೆದ ಇವರು ಹೋಗೆನ್‌ರವರ ನಂತರ ೧೪ ಏಪ್ರಿಲ್ ೧೯೬೪ ರಲ್ಲಿ ಧರ್ಮಾಧ್ಯಕ್ಷರಾದರು. ಕ್ರಿಯಾಶೀಲರಾಗಿದ್ದ ಇವರ ಅವಧಿಯಲ್ಲಿ ಬಳ್ಳಾರಿ ಧರ್ಮಕ್ಷೇತ್ರವು ಬಹಳ ಪ್ರಗತಿಯನ್ನು ಕಂಡಿತು. ಇವರು ಟಿ.ಬಿ.ಡ್ಯಾಂ, ಮುನಿರಾಬಾದ್, ಸಂಡೂರು, ಸಿರುಗುಪ್ಪಗಳಲ್ಲಿ ಧರ್ಮಕೇಂದ್ರಗಳನ್ನು ಸ್ಥಾಪಿಸಿದರು. ೧೩ ಕ್ಕೂ ಹೆಚ್ಚಿನ ಮಿಷನ್ ಸಂಸ್ಥೆಗಳನ್ನು ಆಹ್ವಾನಿಸಿ ಅವರುಗಳು ಬಳ್ಳಾರಿಯಲ್ಲಿ ಸೇವೆ ಸಲ್ಲಿಸುವಂತೆ ಸೂಚಿಸಿದರು. ಸುಮಾರು ೨೮ ವರ್ಷಗಳ ಅಮೋಘ ಸೇವೆಯ ನಂತರ ೧೯೯೨ ರಲ್ಲಿ ನಿವೃತ್ತಿಯನ್ನು ಪಡೆದರು.

**ಜೋಸೆಫ್ ಡಿ. ಸಿಲ್ವಾ**

ಬಳ್ಳಾರಿ ಧರ್ಮಕ್ಷೇತ್ರದ ಮೂರನೇ ಧರ್ಮಾಧ್ಯಕ್ಷರಾಗಿ ೦೯ ಮಾರ್ಚ್ ೧೯೯೩ ರಲ್ಲಿ ಪದಗ್ರಹಣ ಮಾಡಿದರು. ಇವರು ಬಳ್ಳಾರಿ ನಗರ ಸೇರಿದಂತೆ ಬಂಡಿಹಟ್ಟಿ ಇನ್ನಿತರ ಪ್ರದೇಶಗಳಲ್ಲಿ ನೂತನ ಚರ್ಚ್‌ಗಳನ್ನು ನಿರ್ಮಿಸಿದರು. ಹಲವು ಕನ್ಯಾಸಹೋದರಿ ಮಿಷನಗಳನ್ನು ಬಳ್ಳಾರಿಗೆ ಕರೆತಂದು ಸೇವೆ ಒದಗಿಸುವಂತೆ ಮಾಡಿದ್ದಾರೆ. ಕಳೆದ ವರ್ಷ ೨೦೦೬ ನವೆಂಬರ್ ೧೭ ರಂದು ಇವರು ದೈವಾಧೀನರಾದರು.

ಈ ಮಿಷನ್‌ನ ಫಾ. ವಿಜಯಕುಮಾರ್ ಪಿ., ಫಾ. ಮಾರ್ಕ್, ಫಾ. ಒ. ವಿನ್ಸೆಂಟ್, ಫಾ. ಜೆ. ಪ್ರಕಾಶ್‌ಫ್ರಾನ್ಸಿಸ್ ಮುಂತಾದ ಮಿಷನರಿಗಳು ಜಿಲ್ಲೆಯ ಪ್ರಮುಖ ಪಟ್ಟಣಗಳಲ್ಲಿ ಇರುವ ತಮ್ಮ ಚರ್ಚ್‌ಗಳ ಮೂಲಕ ಸ್ಥಳೀಯ ಕ್ಯಾಥೋಲಿಕ್ ಜನರ ಆಧ್ಯಾತ್ಮಿಕ ಸೇವೆಯೊಂದಿಗೆ ಧರ್ಮಕ್ಷೇತ್ರದ ಹತ್ತು ಹಲವು ಕಾರ್ಯಗಳಲ್ಲಿ ತೊಡಗಿದ್ದಾರೆ.

ಈ ಮಿಷನ್ ಇಂದು ನಿರ್ವಹಿಸುತ್ತಿರುವ ಶಿಕ್ಷಣ ಮತ್ತು ಚಾರಿಟಿ ಕೇಂದ್ರಗಳು ಈ ಕೆಳಗಿನಂತಿವೆ.

೧. ಸಂತ ಜಾನರ ಪ.ಪೂ.ಕಾಲೇಜ್, ಕೋಟೆ, ಬಳ್ಳಾರಿ
   ವಿಭಾಗಗಳು ಕಲಾ, ವಾಣಿಜ್ಯ, ಶಿಕ್ಷಣ, ವಿಜ್ಞಾನ.

೨. ಸಂತ ಜಾನ್‌ರ ಪ್ರೌಢಶಾಲೆ, ಕನ್ನಡ, ಇಂಗ್ಲಿಷ್, ಕೋಟೆ, ಬಳ್ಳಾರಿ

೩. ಸಂತ ಜೋಸೆಫ್‌ರ ಬಾಲಕರ ಪ್ರೌಢಶಾಲೆ ಕನ್ನಡ ಮತ್ತು ಇಂಗ್ಲಿಷ್, ಕೌಲ್‌ಬಜಾರ್, ಬಳ್ಳಾರಿ

೪. ವಿಯೆನ್ನಾ ವಿದ್ಯಾಲಯ ಪ್ರೌಢಶಾಲೆ ಕಂಟೋನ್‌ಮೆಂಟ್, ಬಳ್ಳಾರಿ

೫. ಸಂತ ಜಾನ್‌ರ ಹಿ.ಪ್ರಾ.ಶಾಲೆ ಕನ್ನಡ ಇಂಗ್ಲಿಷ್ ಕೋಟೆ ಬಳ್ಳಾರಿ

೬. ಸಂತ ಜೋಸೆಫ್ ಬಾಲಕರ ಹಿ.ಪ್ರಾ.ಶಾಲೆ, ಕನ್ನಡ, ಇಂಗ್ಲಿಷ್ ಕಂಟೋನ್‌ಮೆಂಟ್, ಬಳ್ಳಾರಿ

೭. ವಿಯೆನ್ನಾ ವಿದ್ಯಾಲಯ ಹಿ.ಪ್ರಾ.ಶಾಲೆ. ಕಂಟೋನ್‌ಮೆಂಟ್

೮. ಕ್ವೀನ್ ಮೇರಿ ಶಾಲೆ ಕಂಪ್ಲಿ, ಬಳ್ಳಾರಿ

೯. ಸಂತ ಜಾನ್‌ರ ವಸತಿನಿಲಯ, ಕೋಟೆ, ಬಳ್ಳಾರಿ ಸುಮಾರು ೯೦ ವಿದ್ಯಾರ್ಥಿಗಳಿಂದ ಕೂಡಿದೆ.

**ಸಾಲೇಶಿಯನ್ ಮಿಷನರಿ ಆಫ್ ಮೇರಿ ಇಮ್ಯಾಕುಲೇಟ್**

ಈ ಸಭೆಯು ಫಾ. ಹೆನ್ರಿಯವರಿಂದ ೧೮೭೨ ರ ಅಕ್ಟೋಬರ್ ೦೫ ರಂದು ಪ್ಯಾರಿಸಿನಲ್ಲಿ ಸ್ಥಾಪನೆಯಾಯಿತು. ೧೮೮೯ ರಲ್ಲಿ ನಾಗಪುರದಲ್ಲಿ ಕೇಂದ್ರವನ್ನು ತೆರೆಯುವ ಮೂಲಕ ಭಾರತದಲ್ಲಿ ತನ್ನ ಕಾರ್ಯಾರಂಭಿಸಿತು. ಅಲ್ಲಿಂದ ಭಾರತದ ಇತರೆಡೆ ಹರಡುತ್ತಾ ೧೯೧೪ ರಲ್ಲಿ ಕರ್ನಾಟಕದ ಬೆಂಗಳೂರಿನಲ್ಲಿ ತನ್ನ ಪ್ರಧಾನ ಕೇಂದ್ರವನ್ನು ಆರಂಭಿಸಿತು. ೧೯೭೧ ರಲ್ಲಿ ರೆ. ಫಾ. ಡೆನಿಸ್ ಮೆನೆಜಿಸ್ ರವರು ಸಂಡೂರಿನಲ್ಲಿ ಚರ್ಚ್ ಒಂದನ್ನು ನಿರ್ಮಿಸಿದರು. ಈ ಹಿನ್ನೆಲೆಯ ಸಂಡೂರಿಗೆ ಸಾಲೇಶಿಯನ್ ಆಫ್ ಮೇರಿ ಇಮ್ಯಾಕುಲೇಟ್ ಮಿಷನ್‌ನ ಕನ್ಯಾಸಹೋದರಿಯರು ೧೯೮೦ ರ ಸುಮಾರಿನಲ್ಲಿ ಧರ್ಮಾಧ್ಯಕ್ಷ ಅಂಬ್ರೂಜ್ ಎಡನಪಳ್ಳಿಯವರ ಆಹ್ವಾನದ ಮೇರೆಗೆ ಬಂದರು. ತಮ್ಮ ಕೇಂದ್ರವನ್ನು ಕೃಪಾನಿಲಯ ಎಂದು ಹೆಸರಿಸಿಕೊಂಡರು. ಇದೇ ಹೆಸರಿನಲ್ಲಿ ಇಂದಿಗೂ ಈ ಕನ್ಯಾಸಹೋದರಿಯರು ಶೈಕ್ಷಣಿಕ ಮತ್ತು ಆರೋಗ್ಯ ಸೇವೆ ಸಲ್ಲಿಸುತ್ತಿದ್ದಾರೆ.

ಇವರ ಸಂಡೂರು ಕೇಂದ್ರಿತ ಶಿಕ್ಷಣ ಕೇಂದ್ರಗಳು

೧. ಕೃಪಾನಿಲಯ ಪ್ರೌಢಶಾಲೆ

೨. ಕೃಪಾನಿಲಯ ಪ್ರಾಥಮಿಕ ಶಾಲೆ

೩. ಕೃಪಾನಿಲಯ ನರ್ಸರಿ ಶಾಲೆ

ಇವರ ಸಂಡೂರು ಮತ್ತು ಪಕ್ಕದ ಗ್ರಾಮಗಳ ಕೇಂದ್ರಿತ ಆರೋಗ್ಯ ಕೇಂದ್ರಗಳು

೧. ಕೃಪಾನಿಲಯ ಮೆಟರ್ನಿಟಿ ಕೇಂದ್ರ

೨. ಕೃಪಾನಿಲಯ ಔಷಧಾಲಯ

೩. ಕೃಪಾನಿಲಯ ಸಂಚಾರಿ ಔಷಧಾಲಯ

### ಸಿಸ್ಟರ್ಸ್ ಆಫ್ ಬೆಥನಿ ಲಿಟಲ್‌ಫ್ಲವರ್

ಲಿಟಲ್ ಫ್ಲವರ್ ಕನ್ಯಾಸಹೋದರಿಯರ ಈ ಸಭೆಯು ಸ್ಥಳೀಯ ಕರ್ನಾಟಕದ ಸಭೆಯಾಗಿದೆ. ಫಾ. ಮೊನ್ಸಿಂಜೋರ್ ಮಸ್ಕರೇನಸ್‌ರವರು ಈ ಸಭೆಯನ್ನು ೧೬ ಜುಲೈ ೧೯೨೧ ರಂದು ಸ್ಥಾಪಿಸಿದರು. ಇಂದು ಪ್ರಪಂಚದಾದ್ಯಂತ ಹರಡಿರುವ ಈ ಸಭೆಯು ಕರ್ನಾಟಕದಲ್ಲಿ ೧೦೮ ಕೇಂದ್ರಗಳಲ್ಲಿ ಸೇವೆ ಸಲ್ಲಿಸುತ್ತಿದೆ. ಈ ಕೇಂದ್ರಗಳಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಮತ್ತು ಸಿರುಗುಪ್ಪ ಕೇಂದ್ರಗಳೂ ಸೇರಿವೆ. ಹೊಸಪೇಟೆಯಲ್ಲಿ ೧೯೮೭ರಲ್ಲಿ ಕಾರ್ಯಾರಂಭಿಸಿ ಶೈಕ್ಷಣಿಕ ಸೇವೆಯ ಮೂಲಕ ಸಮಾಜ ಸುಧಾರಣೆಯಲ್ಲಿ ತೊಡಗಿದೆ. ಅಲ್ಲದೆ ಸಿರುಗುಪ್ಪ ನಗರದಲ್ಲೊಂದು ವಸತಿನಿಲಯವನ್ನು ನಿರ್ವಹಿಸುತ್ತಿದೆ.

ಇವರ ಹೊಸಪೇಟೆ ಶಿಕ್ಷಣ ಕೇಂದ್ರಗಳು

೧. ಲಿಟಲ್ ಫ್ಲವರ್ ಹಿರಿಯ ಪ್ರಾಥಮಿಕ ಶಾಲೆ - ಇಂಗ್ಲಿಷ್

೨. ಲಿಟಲ್ ಫ್ಲವರ್ ಹಿರಿಯ ಪ್ರಾಥಮಿಕ ಶಾಲೆ - ಕನ್ನಡ

೩. ಲಿಟಲ್ ಫ್ಲವರ್ ನರ್ಸರಿ ಶಾಲೆ

೪. ಲಿಟಲ್ ಫ್ಲವರ್ ಬಾಲಕರ ವಸತಿ ನಿಲಯ

ಮತ್ತು ಸಿರುಗುಪ್ಪದಲ್ಲಿರುವ ಈ ಸಭೆಯ ಲಿಟಲ್ ಫ್ಲವರ್ ವಸತಿನಿಲಯವನ್ನು ಹೆಸರಿಸಬಹುದಾಗಿದೆ.

### ಸಲೇಶಿಯನ್ಸ್ ಆಫ್ ಡಾನ್ ಬಾಸ್ಕೋ

ಈ ಮಿಷನ್ ಸಭೆಯು ೧೮೪೪ ರಲ್ಲಿ ಸಂತ ಜಾನ್ ಬಾಸ್ಕೋರವರಿಂದ ರೋಮ್‌ನಲ್ಲಿ ಸ್ಥಾಪಿಸಲ್ಪಟ್ಟಿತು. ಭಾರತದಲ್ಲಿ ಆರು ಪ್ರಾಂತ್ಯಗಳನ್ನು ಹೊಂದಿದ್ದು ಬೆಂಗಳೂರಿನಲ್ಲಿ ಇದರ ಪ್ರಾದೇಶಿಕ ಕೇಂದ್ರ ಕಾರ್ಯ ನಿರ್ವಹಿಸುತ್ತಿದೆ. ೧೯೭೦ ರ ದಶಕದಲ್ಲಿ ಧರ್ಮಾಧ್ಯಕ್ಷ ಅಂಬ್ರೂಜ್ ಎಡನಪಳ್ಳಿ ಅವರ ಅವಧಿಯಲ್ಲಿ ಬಳ್ಳಾರಿಗೆ ಆಗಮಿಸಿ ಹೊಸಪೇಟೆ ನಗರದಲ್ಲಿ ಕೇಂದ್ರವನ್ನು ಆರಂಭಿಸಿದರು. ಈ ಪೂರ್ವದಲ್ಲಿ ಹೊಸಪೇಟೆಯು ಓ. ಎಫ್. ಎಂ. ಪಾದ್ರಿಗಳಾದ ರೆ. ಫಾ. ಕೂಪರ್‌ಡ್ರಾಡ್, ಫಾದರ್ ಫಿಡೆಲಿಜ್ ಮುಂತಾದವರಿಂದ ಆಧ್ಯಾತ್ಮಿಕ ಸೇವೆಯನ್ನು ನೀಡಲಾಗುತ್ತಿತ್ತು. ಡಾನ್ ಬಾಸ್ಕೋ ಕನ್ಯಾ ಸಹೋದರಿಯರ ಆಗಮನದಿಂದ ವೈದ್ಯಕೀಯ ಮತ್ತು ವೃತ್ತಿಪರ ತರಬೇತಿ ಸೇವೆಯು ಹೊಸಪೇಟೆ ಕೇಂದ್ರದಲ್ಲಿ ಪ್ರಾರಂಭವಾದವು.

೧. ಡಾನ್ ಬಾಸ್ಕೋ ಕುಷ್ಠರೋಗ ನಿವಾರಣಾ ಕೇಂದ್ರ

೨. ಡಾನ್ ಬಾಸ್ಕೋ ಹಾಸ್ಟೆಲ್

ಮತ್ತು ಬೆಂಗಳೂರು ಪ್ರಧಾನಕೇಂದ್ರದಲ್ಲಿ ತರಬೇತಿ ಪಡೆದ ಧರ್ಮಸೇವಕರಿಂದ ಹೊಸಪೇಟೆಯ ಡಾನ್ ಬಾಸ್ಕೋ ಪ್ರೊಫೇಶನಲ್ ಅಕಾಡೆಮಿಯಲ್ಲಿ ಸ್ಥಳೀಯ ಯುವಕ ಯುವತಿಯರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ಅನುವಾಗುವಂತೆ ವೃತ್ತಿಪರ ತರಬೇತಿಯನ್ನು ನೀಡಲಾಗುತ್ತಿದೆ.

### ಅಸ್ಸಿಸಿ ಸಿಸ್ಟರ್ಸ್ ಆಫ್ ಮೇರಿ ಇಮ್ಯಾಕುಲೇಟ್

ಈ ಮಿಷನ್ ಸಭೆಯು ಕೇರಳದಲ್ಲಿ ಜೋಸೆಫ್ ಕೆ. ಡಬ್ಲ್ಯು. ಥಾಮಸ್‌ರವರಿಂದ ಸ್ಥಾಪನೆಯಾದ ದೇಶೀ ಸಭೆಯಾಗಿದೆ. ಬೆಂಗಳೂರಿನಲ್ಲಿ ಕೇಂದ್ರವನ್ನು ತೆರೆಯುವ ಮೂಲಕ ಕರ್ನಾಟಕಕ್ಕೆ ತನ್ನ ಕಾರ್ಯವನ್ನು ವಿಸ್ತರಿಸಿತು. ೧೯೫೫ ರಲ್ಲಿ ಕರ್ನಾಟಕ ಸರ್ಕಾರದ ಸಹಯೋಗದಲ್ಲಿ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಗೆ ಈ ಸಭೆಯ ಐದು ಸಹೋದರಿಯರು ಆಗಮಿಸಿ ತಮ್ಮ ಕಾನ್ವೆಂಟ್‌ನ್ನು ಸ್ಥಾಪಿಸಿದರು. ಕುಷ್ಠರೋಗಿಗಳ ಸೇವೆಯಲ್ಲಿ ಪರಿಣಿತರಾದ

ಈ ಸಹೋದರಿಯರು ಒಂದು ಕುಷ್ಠರೋಗ ನಿವಾರಣಾ ಕೇಂದ್ರವನ್ನು ಆರಂಭಿಸಿ ಆ ಮೂಲಕ ಆ ಪ್ರದೇಶದ ಸುತ್ತಲಿನ ಬಹುಸಂಖ್ಯೆಯ ಕುಷ್ಠರೋಗಿಗಳಿಗೆ ಚಿಕಿತ್ಸೆ ನೀಡುತ್ತಿದ್ದಾರೆ. ಹಗರಿಬೊಮ್ಮನಹಳ್ಳಿಯಲ್ಲಿರುವ ಇವರ ಇತರ ಸೇವಾಕೇಂದ್ರಗಳು ಕೆಳಗಿನಂತಿವೆ.

೧. ಅಸ್ಸಿಸಿ ಆಸ್ಪತ್ರೆ

೨. ಅಸ್ಸಿಸಿ ಕುಷ್ಠರೋಗ ನಿವಾರಣಾ ಕೇಂದ್ರ

೩. ಅಸ್ಸಿಸಿ ಸಂಚಾರಿ ಔಷಧಾಲಯ

**ಸಿಸ್ಟರ್ಸ್ ಆಫ್ ಚಾರಿಟಿ**

ಇಟಲಿಯಲ್ಲಿ ಕ್ರಿ.ಶ. ೧೮೩೨ ರ ನವೆಂಬರ್ ೨೧ ರಂದು ಸಂತ ಬರ್ಥಲೋಮಿಯಾ ಕಪಿತಾನಿಯೋ ಮತ್ತು ವಿನ್ಸಂತಿಯಾ ಜೆರೋಸಾ ಎಂಬುವರಿಂದ ಸಿಸ್ಟರ್ಸ್ ಆಫ್ ಚಾರಿಟಿ ಮಿಷನ್ ಸಭೆ ಸ್ಥಾಪನೆಯಾಯಿತು. ೧೮೬೦ ರಲ್ಲಿ ಈ ಸಭೆಯು ಬೆಂಗಳೂರಿನಲ್ಲಿ ಕೇಂದ್ರವನ್ನು ತೆರೆಯುವ ಮೂಲಕ ಭಾರತದಲ್ಲಿ ತನ್ನ ಸೇವೆಯನ್ನು ಆರಂಭಿಸಿತು. ಧರ್ಮಾಧ್ಯಕ್ಷ ಅಂಬ್ರೂಜ್ ಎಡನಪಳ್ಳಿರವರ ಆಹ್ವಾನದ ಮೇರೆಗೆ ೧೯೯೦ ರಲ್ಲಿ ಕಂಪ್ಲಿ ಪ್ರದೇಶದಲ್ಲಿ ತಮ್ಮ ಕಾನ್ವೆಂಟನ್ನು ಸ್ಥಾಪಿಸಿದರು. ಇಲ್ಲಿ ಕಾರ್ಯನಿರ್ವಹಿಸಿದ ಮಿಷನರಿ ಸಹೋದರಿಯರಲ್ಲಿ ಸಿಸ್ಟರ್ ಒಲಂಪಿಯಾ ಮತ್ತು ಸಿಸ್ಟರ್ ಸುಮಲತಾ ಪ್ರಮುಖರು. ಈ ಚಾರಿಟಿ ಕೇಂದ್ರವು ಒಂದು ಆರೋಗ್ಯ ಸೇವಾಕೇಂದ್ರವನ್ನು ಮತ್ತು ಒಂದು ನರ್ಸರಿ ಶಾಲೆಯನ್ನು ಮತ್ತು ಮಹಿಳೆಯರಿಗಾಗಿ ವೃತ್ತಿ ತರಬೇತಿ ಕೇಂದ್ರವನ್ನು ಹೊಂದಿದ್ದು ಅವು ಈ ಮುಂದಿನಂತಿವೆ.

೧. ಸಹಾಯ ಮಾತೆ ಔಷಧಾಲಯ

೨. ಸಹಾಯ ಮಾತೆ ನರ್ಸರಿ ಶಾಲೆ

೩. ಸಹಾಯ ಮಾತೆ ಗೃಹಿಣಿ ತರಬೇತಿ ಕೇಂದ್ರ

**ಸಿಸ್ಟರ್ಸ್ ಆಫ್ ಸಂತ ಜೋಸೆಫ್ ಆಫ್ ಕ್ಲನಿ**

ಕ್ರಿ.ಶ. ೧೮೦೭ ರ ಮಾರ್ಚ್ ೧೨ ರಂದು ಅನ್ನೇ ಮರಿಯಾ ಎಂಬುವರಿಂದ ವಿದೇಶದಲ್ಲಿ ಸ್ಥಾಪಿತವಾದ ಈ ಮಿಷನ್ ಇಡೀ ನೈರುತ್ಯ ಭಾರತದಲ್ಲಿಯೇ ತನ್ನ ಪ್ರಥಮ ಕೇಂದ್ರವನ್ನು ಬಳ್ಳಾರಿಯಲ್ಲಿ ಸ್ಥಾಪಿಸಿತು. ಇಂದಿಗೂ ಅಂಗವಿಕಲರ ಸೇವೆಯಲ್ಲಿ ತೊಡಗಿಸಿಕೊಂಡಿದೆ. ಬಳ್ಳಾರಿಯ ಓ. ಪಿ. ಡಿ. ಪಕ್ಕದಲ್ಲಿರುವ ನವಜೀವನ ರಿಹ್ಯಾಬಿಲೇಷನ್ ಕೇಂದ್ರವನ್ನು ಈ ಸಭೆಯು ನಿರ್ವಹಿಸುತ್ತಿದ್ದು ಸುಮಾರು ೧೫೦ ಕ್ಕೂ ಹೆಚ್ಚಿನ ಅಂಗವಿಕಲರ ಆರೈಕೆಯನ್ನು ಮಾಡುತ್ತಿದೆ.

**ಸೊಸೈಟಿ ಆಫ್ ಜೀಸಸ್, ಮೇರಿ ಅಂಡ್ ಜೋಸೆಫ್**

ರೆ. ಫಾ. ಮಥಾಯೀಸ್‌ರವರಿಂದ ೧೮೨೨ ರ ಜುಲೈ ೨೬ ರಂದು ಹಾಲೆಂಡಿನಲ್ಲಿ ಸ್ಥಾಪನೆಯಾದ ಈ ಮಿಷನ್ ಸಭೆಯು ಧರ್ಮಾಧ್ಯಕ್ಷ ಅಂಬ್ರೂಜ್ ಎಡನಪಳ್ಳಿರವರ ಆಮಂತ್ರಣದ ಮೇರೆಗೆ ೧೯೯೫ ಮೇ ೨೨ ರಂದು ಬಳ್ಳಾರಿಗೆ ಆಗಮಿಸಿತು. ಸಿರುಗುಪ್ಪದಲ್ಲಿ ಕೇಂದ್ರವನ್ನು ಹೊಂದಿರುವ ಈ ಸಭೆಯು ಪ್ರಾಥಮಿಕ ಮತ್ತು ಪ್ರೌಢಶಾಲೆಯನ್ನು ಮತ್ತು ಒಂದು ಚಿಕ್ಕ ಆಸ್ಪತ್ರೆಯನ್ನು ನಿರ್ವಹಿಸುತ್ತಿದೆ. ಅಲ್ಲದೆ ಒಂದು ಸಂಚಾರಿ ಚಿಕಿತ್ಸಾಕೇಂದ್ರವನ್ನು ಹೊಂದಿದ್ದು ಸಿರುಗುಪ್ಪ ಪಕ್ಕದ ಗ್ರಾಮೀಣ ಜನತೆಗೆ ಈ ಮೂಲಕ ಸೇವೆ ಸಲ್ಲಿಸುತ್ತಿದೆ. ಇವರ ಸೇವಾಕೇಂದ್ರಗಳು ಇಂತಿವೆ.

೧. ವಿಜಯ ಮೇರಿ ಪ್ರೌಢಶಾಲೆ

೨. ವಿಜಯ ಮೇರಿ ನರ್ಸರಿ ಶಾಲೆ

೩. ವಿಜಯ ಮೇರಿ ಆಸ್ಪತ್ರೆ

೪. ವಿಜಯ ಮೇರಿ ಹೆರಿಗೆ ಆಸ್ಪತ್ರೆ

೫. ವಿಜಯ ಮೇರಿ ಸಂಚಾರಿ ಆಸ್ಪತ್ರೆ

**ಕಾರ್ಮಲೈಟ್ ಆರ್ಡರ್ ಸಭೆ**

ಈ ಸಭೆಯು ಅತಿ ಪ್ರಾಚೀನ ಸಭೆಗಳಲ್ಲಿ ಒಂದಾಗಿದೆ. ೧೭ ನೇ ಶತಮಾದಿಂದಲೂ ದೇಶದ ನಾನಾ ಭಾಗದ ಮಿಷನ್ ಸಭೆಗಳನ್ನು ನಿರ್ವಹಿಸುತ್ತಾ ಬಂದಿದೆ. ಇಂದು ಪ್ರಪಂಚದಾದ್ಯಂತ ಸುಮಾರು ನಾಲ್ಕು ಸಾವಿರ ಪಾದ್ರಿಗಳನ್ನು ೧,೩೦೦ ಸನ್ಯಾಸಿನಿಯರನ್ನು ಹೊಂದಿದೆ. ಈ ಸಭೆಯ ಕರ್ನಾಟಕ ಮತ್ತು ಗೋವಾ ಪ್ರಾಂತ್ಯಗಳು ಒಗ್ಗೂಡಿ ಸೇವೆಯಲ್ಲಿ ತೊಡಗಿವೆ. ಮಂಗಳೂರಿನಲ್ಲಿದ್ದ ಇದರ ಮುಖ್ಯ ಕಛೇರಿಯು ೧೯೯೬ ರಲ್ಲಿ ಬೆಂಗಳೂರಿಗೆ ವರ್ಗವಾಯಿತು. ಬಳ್ಳಾರಿ ಧರ್ಮ ಸಭೆಗೆ ೧೯೯೮ ಜುಲೈ ೧೬ ರಂದು ಈ ಸಭೆಯ ಮೂವರು ಪಾದ್ರಿಗಳು ಆಗಮಿಸಿ ಹೂವಿನ ಹಡಗಲಿಯಲ್ಲಿ ತಮ್ಮ ಕೇಂದ್ರವನ್ನು ಸ್ಥಾಪಿಸಿ, ಆಧ್ಯಾತ್ಮಿಕ ಸೇವೆಯಲ್ಲಿ ಮಾತ್ರ ತೊಡಗಿದ್ದಾರೆ.

**ಮಿಷನರಿ ಆಫ್ ಚಾರಿಟಿ**

ಭಾರತರತ್ನ ಮದರ್ ಥೆರೇಸಾ ಅವರಿಂದ ೧೯೫೦ ರ ಅಕ್ಟೋಬರ್ ೭ ರಂದು ಕೊಲ್ಕತ್ತಾದಲ್ಲಿ ಈ ಮಿಷನ್ ಸಭೆಯು ಸ್ಥಾಪನೆಯಾಯಿತು. ಬಳ್ಳಾರಿಯ ಕಂಟೋನ್‌ಮೆಂಟ್ ಪ್ರದೇಶದಲ್ಲಿ ಉಪಕೇಂದ್ರವನ್ನು ಹೊಂದಿರುವ ಮಿಷನರಿ ಆಫ್ ಚಾರಿಟಿ ಸಭೆಯ ಕನ್ಯಾಸಹೋದರಿಯರು ನಿರಾಧಾರಿಗಳ ಮತ್ತು ಅನಾಥರ ಸೇವೆಯಲ್ಲಿ ತೊಡಗಿದ್ದಾರೆ. ಕಂಟೋನ್‌ಮೆಂಟ್‌ನಲ್ಲಿರುವ ಅನಾಥರಿಗಾಗಿನ ಶಿಶುಭವನವು ಸುಮಾರು ೧೨೦ ಅನಾಥರಿಗೆ ಆಶ್ರಯವನ್ನು ನೀಡಿದೆ. ಮತ್ತು ಇದೇ ಕೇಂದ್ರದ ಮತ್ತೊಂದು ಭಾಗದಲ್ಲಿ ನಿರ್ಮಲಹೃದಯಭವನ ಎಂಬ ನಿರಾಧಾರಿಗಳ ಸೇವೆಗಾಗಿ ನಿರ್ಮಿಸಲಾಗಿದೆ. ಇಲ್ಲಿ ಸುಮಾರು ೮೦ ನಿರಾಧಾರಿಗಳು ಆಶ್ರಯ ಪಡೆದಿದ್ದಾರೆ.

**ಮಿಷನರಿ ಸಿಸ್ಟರ್ಸ್ ಆಫ್ ಮೇರಿ ಇಮ್ಯಾಕುಲೇಟ್**

ಈ ಸಭೆಯು ೧೯೬೨ ರ ಸೆಪ್ಟೆಂಬರ್‌ನಲ್ಲಿ ರೆ. ಫಾ. ಸಿ. ಜೆ. ವರ್ಕಿರವರಿಂದ ಸ್ಥಾಪನೆಯಾಯಿತು. ಜೂನ್ ೧, ೨೦೦೩ ರಂದು ಬಳ್ಳಾರಿಗೆ ಆಗಮಿಸಿದ ಈ ಸಭೆಯ ಕನ್ಯಾಸಹೋದರಿಯರು ಹೊಸಪೇಟೆಯಲ್ಲಿರುವ ಡಾನ್‌ಬಾಸ್ಕೋ ಸಭೆಯ ಪಾದ್ರಿಗಳೊಂದಿಗೆ ಮಕ್ಕಳ ಮತ್ತು ಮಹಿಳೆಯರಿಗಾಗಿನ ಸಮಾಜ ಸೇವಾ ಕಾರ್ಯದಲ್ಲಿ ಸಹಕರಿಸಲು ನಿರ್ಧರಿಸಿ ಹೊಸಪೇಟೆಯಲ್ಲಿ ತಮ್ಮ ಕಾನ್ವೆಂಟ್ ಅನ್ನು ಸ್ಥಾಪಿಸಿದರು. ಬಳ್ಳಾರಿ ಧರ್ಮಾಧ್ಯಕ್ಷರ ಆಹ್ವಾನದಂತೆ ಬಳ್ಳಾರಿ ನಗರದ ಆರೋಗ್ಯಮಾತೆ ಕೇಂದ್ರದಲ್ಲಿ ಕಾರ್ಯನಿರ್ವಹಿಸಲು ಜೂನ್ ೭, ೨೦೦೪ ರಂದು ಬಳ್ಳಾರಿಗೆ ಆಗಮಿಸಿ ತಮ್ಮ ಮತ್ತೊಂದು ಕೇಂದ್ರವನ್ನು ಜಿಲ್ಲೆಯಲ್ಲಿ ಸ್ಥಾಪಿಸಿದರು. ಇವರ ಮುಖ್ಯ ಪ್ರಾದೇಶಿಕ ಕೇಂದ್ರ ಕೇರಳದಲ್ಲಿದೆ.

**ಮಿಷನರಿ ಸಿಸ್ಟರ್ಸ್ ಆಫ್ ಸೇಕ್ರೆಡ್ ಹಾರ್ಟ್ ಆಫ್ ಜೀಸಸ್**

ನೂತನವಾದ ಈ ಮಿಷನ್ ಸಭೆಯು ೧೯೯೦ ರಲ್ಲಿ ಜರ್ಮನಿಯಲ್ಲಿ ಫಾ. ಹರ್ಬಟ್ ಲಿಂಕೆನ್ಸ್‌ರವರಿಂದ ಸ್ಥಾಪಿತವಾಯಿತು. ಕಳೆದ ೨೦೦೫ ರಲ್ಲಿ ಫಾ. ಜೋಸೆಫ್ ಡಿ ಸಿಲ್ವಾರವರ ಆಹ್ವಾನದ ಮೇರೆಗೆ ಆಗಮಿಸಿದ ಈ ಮಿಷನ್ ಕುರುಗೋಡಿನಲ್ಲಿ ತನ್ನ ಕೇಂದ್ರವನ್ನು ಆರಂಭಿಸಿತು. ಈ ಸಭೆಯ ಕನ್ಯಾಸಹೋದರಿಯರು ಕುರುಗೋಡು ಪಟ್ಟಣದ ಹರಿಪ್ರಿಯಾ ಕಾಲೋನಿಯಲ್ಲಿ ಸೇಕ್ರೆಡ್ ಹಾರ್ಟ್ ಕಿಂಡರ್‌ಗಾರ್ಟನ್ ಶಾಲೆಯನ್ನು ನಡೆಸುತ್ತಿದ್ದಾರೆ.

**ಸಿಸ್ಟರ್ಸ್ ಆಫ್ ದಿ ಕ್ರಾಸ್ ಆಫ್ ಚವನೋಡ್**

ಫ್ರಾನ್ಸ್ ಮೂಲದ ಈ ಮಿಷನ್ ಸಭೆಯು ೧೮೩೮ ರಲ್ಲಿ ಸ್ಥಾಪನೆಯಾಗಿದ್ದರೂ ತಡವಾಗಿ ಭಾರತದಲ್ಲಿ ಸೇವೆಯನ್ನು ಆರಂಭಿಸಿತು. ಧರ್ಮಾಧ್ಯಕ್ಷ ಜೋಸೆಫ್ ಡಿ ಸಿಲ್ವಾರವರ ಅವಧಿಯಲ್ಲಿ ಬಳ್ಳಾರಿ ನಗರಕ್ಕೆ ಹತ್ತಿರವಿರುವ ಲಕ್ಷ್ಮೀನಗರ ಕ್ಯಾಂಪಿನಲ್ಲಿ ಹೋಲಿ ಕ್ರಾಸ್ ಕಾನ್ವೆಂಟನ್ನು ಸ್ಥಾಪಿಸಿದರು. ಈ ಸಭೆಯ ಸಹೋದರಿಯರು ಶಿಕ್ಷಣ ಮತ್ತು ಆರೋಗ್ಯ ಸೇವೆಯಲ್ಲಿ ತೊಡಗಿ ಆ ಭಾಗದ ಜನರ ಪ್ರೀತಿಗೆ ಪಾತ್ರರಾಗಿದ್ದಾರೆ. ಇವರ ಸೇವಾಕೇಂದ್ರಗಳು

೧. ಹೋಲಿ ಕ್ರಾಸ್ ಪ್ರಾಥಮಿಕ ಶಾಲೆ

೨. ಹೋಲಿ ಕ್ರಾಸ್ ನರ್ಸರಿ ಶಾಲೆ

ಕ್ರಿ.ಶ. ೧೮೦೦ ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿ ವ್ಯಾಪ್ತಿಗೆ ಬಳ್ಳಾರಿ ಪ್ರಾಂತ್ಯವು ಒಳಪಟ್ಟಾಗ ಮಿಷನರಿಗಳಿಗೆ ಕ್ರೈಸ್ತ ಧರ್ಮ ಪ್ರಚಾರಕ್ಕಾಗಿ ದೊರೆತ ಸೂಕ್ತ ಪ್ರದೇಶವಾಗಿ ಕಂಡುಬಂದಿತು. ಇಲ್ಲಿನ ಬ್ರಿಟಿಷ್ ಸಾಮಾನ್ಯ ಸೈನಿಕರು ಮತ್ತು ಸೈನಿಕ ಅಧಿಕಾರಿಗಳಿಗೆ ಅಗತ್ಯವಾದ ಆಧ್ಯಾತ್ಮಿಕ ಸೇವೆಯನ್ನು ನೀಡಲು ಆರಂಭದಲ್ಲಿ ಮಿಷನರಿಗಳು ಬಂದರು. ಅತಿಯಾದ ಬಿಸಿಲು, ಅಸಮರ್ಪಕ ರಸ್ತೆ ಸಂಪರ್ಕ, ಭಾಷಾಗೊಂದಲ ಇದ್ದಾಗ್ಯೂ ಬಳ್ಳಾರಿಯಲ್ಲಿ ನೆಲೆನಿಂತರು. ಇಲ್ಲಿಯ ಸ್ಥಳೀಯ ಜನರಲ್ಲಿನ ಮೌಢ್ಯತೆ, ಜಾತಿಬೇಧ ಭಾವ, ಸ್ವತಃ ಬ್ರಿಟಿಷ್ ಸೈನಿಕರಿಂದಾಗುತ್ತಿದ್ದ ದಬ್ಬಾಳಿಕೆ ಮುಂತಾದುವುಗಳನ್ನು ಕಂಡು ಮಿಷನರಿಗಳು ಧಾರ್ಮಿಕ ಕಾರ್ಯದೊಂದಿಗೆ ಸೇವಾಕಾರ್ಯಗಳನ್ನು ಹಮ್ಮಿಕೊಂಡರು. ಈ ರೀತಿಯ ಆರಂಭದ ಸೇವೆ ಅನಾಥರಿಗಾಗಿ ೧೮೧೧ ರಲ್ಲಿ ನೀಡಲು ಆರಂಭಿಸಿದರು. ಮೊದಲಿಗೆ ಬಳ್ಳಾರಿಯಲ್ಲಿ ಶಾಲೆಗಳನ್ನು ಆಂಗ್ಲಮಕ್ಕಳಿಗಾಗಿ ಮಾತ್ರ ತೆರೆಯಲಾಗಿತ್ತು. ನಂತರ ಸ್ಥಳೀಯರಿಗೂ ವಿಸ್ತರಿಸಿದರು. ಮುಂದುವರೆದು ಬಳ್ಳಾರಿಯಲ್ಲಿ ತದನಂತರ ಸ್ಥಾಪಿತವಾದ ವಾರ್ಡ್‌ಲಾ, ಸಂತ ಫಿಲೋಮಿನಾ, ಸಂತ ಜಾನ್ ಪ್ರೌಢಶಾಲೆಗಳು ಮತ್ತು ಸಂತ ಜೋಸೆಫ್ ಪ್ರಾಥಮಿಕ ಶಾಲೆಗಳು ಅಂದಿನ ಮಿಷನರಿಗಳ ಕೊಡುಗೆಗಳಾಗಿದ್ದು ಅದರ ಫಲವನ್ನು ಈ ಭಾಗದ ಜನರು ಈಗಲೂ ಪಡೆಯುತ್ತಿದ್ದಾರೆ. ಬಳ್ಳಾರಿ ನಗರ ಮತ್ತು ಜಿಲ್ಲೆಯ ಪ್ರಮುಖ ಪಟ್ಟಣಗಳಲ್ಲಿರುವ ಕ್ರೈಸ್ತರ ಕೇಂದ್ರಗಳು ಬಳ್ಳಾರಿ ಜನಮಾನಸದಲ್ಲಿ ಬೆರೆತು ಉತ್ತಮ ಸೇವಾ ಕೇಂದ್ರಗಳಾಗಿವೆ. ಇತರೆ ಕೋಮು, ಧರ್ಮಗಳ ಜನರೊಂದಿಗೆ ಸೌಹಾರ್ದಯುತವಾದ ಮತ್ತು ಶಾಂತಿಯುತವಾದ ಸಂಬಂಧವನ್ನು ಬೆಸೆಯಲು ಈ ಸಂಸ್ಥೆಗಳು ಸಹಕಾರಿಯಾಗಿವೆಯಲ್ಲದೆ ಮಾದರಿ ಸಂಸ್ಥೆಗಳಾಗಿವೆ.

## ಅಡಿಟಿಪ್ಪಣಿಗಳು

೧. ಡಾ. ಬಿ. ಎಸ್. ತಲ್ವಾಡಿ, **ಕರ್ನಾಟಕದಲ್ಲಿ ಕ್ರೈಸ್ತರು**, ಕರ್ನಾಟಕ ಕ್ರೈಸ್ತ ಜಾನಪದ ಕೇಂದ್ರ, ಬೆಂಗಳೂರು, ೧೯೯೮, ಪು. ೧೦

೨. ಸಿ. ಬಿ. ಫರ್ತ್, **ಆ್ಯನ್ ಇಂಟ್ರಡಕ್ಷನ್ ಟು ಇಂಡಿಯನ್ ಚರ್ಚ್ ಹಿಸ್ಟರಿ**, ಪುಟ. ೧೫೪

೩. ಸಿ. ಡಿ. ಮ್ಯಾಕ್ಲಿನ್, **ಮದ್ರಾಸ್ ಪ್ರೆಸಿಡೆನ್ಸಿ ಮ್ಯಾನುಯಲ್**, ಸಂಪುಟ ೧, ಏಷಿಯನ್ ಎಜುಕೇಷನಲ್ ಸರ್ವೀಸಸ್, ಮದ್ರಾಸ್, ೧೯೮೯, ಪು. ೬೨೩

೪. ರೆ. ಎನ್. ಸಭಾಪತಿ, **ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ ಬಳ್ಳಾರಿ ಲಂಡನ್ ಮಿಷನ್‌ನ ಕೊಡುಗೆ**, ಕನ್ನಡ ದೈವಜ್ಞಾನ ಸಾಹಿತ್ಯ ಸಮಿತಿ, ಮಂಗಳೂರು, ೨೦೦೧, ಪು. ೧೨

೫. ಆರ್. ಸಿ. ಮಜುಂದಾರ್, **ಬ್ರಿಟಿಷ್ ಪ್ಯಾರಾಮೌಂಟಸಿ ಆ್ಯಂಡ್ ಇಂಡಿಯನ್ ರೆನೈಜಾನ್ಸ್**, ಭಾಗ ಎರಡು, ಭಾರತೀಯ ವಿದ್ಯಾಭವನ್, ಬಾಂಬೆ, ೧೯೬೫, ಪು. ೭೪

೬. ಭಾಷಾಂತರ ಯೋಜನಾ ಸಮಿತಿ, **ಕರ್ನಾಟಕ ಪರಂಪರೆ**, ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು, ೧೯೭೦, ಸಂಪುಟ ೨, ಪು. ೨೮೩

೭. ಸೂರ್ಯನಾಥ್ ಯು. ಕಾಮತ್, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಭಾಗ ಒಂದು, ಕರ್ನಾಟಕ ಸರ್ಕಾರ, ಬೆಂಗಳೂರು, ೧೯೮೨, ಪು.೨೮೨

೮. ಶ್ರೀನಿವಾಸ ಹಾವನೂರ್, **ಹೊಸಗನ್ನಡದ ಅರುಣೋದಯ**, ಪ್ರಗತಿ ಪ್ರಿಂಟ್ಸ್ ಕಮ್ಯುನಿಕೇಶನ್ಸ್, ಬೆಂಗಳೂರು, ೨೦೦೦, ಪು.೯೯

೯.ಆರ್. ಸಿ. ಮಜುಂದಾರ್, **ಪೂರ್ವೋಕ್ತ**, ಪು. ೨೦೧

೧೦. ಸೂರ್ಯನಾಥ್ ಯು. ಕಾಮತ್, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ವೈ.ವಿ.ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು, ೧೯೮೬, ಪು.೨೮೨

೧೧. ಸೂರ್ಯನಾಥ್, ಯು. ಕಾಮತ್, **ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್**, ಗವರ್ನಮೆಂಟ್ ಆಫ್ ಕರ್ನಾಟಕ, ಬೆಂಗಳೂರು, ೧೯೮೨, ಪುಟ. ೪೩೨

೧೨. ಕೆ. ಬಸಪ್ಪ, **ಬಳ್ಳಾರಿಯ ಕೌಲ್‌ಬಜಾರಿನ ಸಾಂಸ್ಕೃತಿಕ ಅಧ್ಯಯನ**, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು. ೩೨

೧೩. ರೆ. ಫಾ. ಸೆಲ್ವಿಸ್ಟರ್ ಗೋಲ್ಡ್‌ರಿಕ್, **ಬಳ್ಳಾರಿ ಮಿಷನ್**, ಫ್ರಾನ್ಸಿಸ್ಕನ್ ಮಿಷನರಿ ಯೂನಿಯನ್, ಲಂಡನ್, ೧೯೬೦, ಪುಟ. ೨೧೦

೧೪. ಫಾ. ಕೆ. ಎ. ಮ್ಯಾಥ್ಯೂ, **ಕರ್ನಾಟಕ ಧರ್ಮಸಭೆ**, ರೆಗೋ ಆ್ಯಂಡ್ ಸನ್ಸ್, ಬೆಂಗಳೂರು, ೨೦೦೦, ಪು.೧೨೮

೧೫. ರೆ. ಫಾ. ಸೆಲ್ವಿಸ್ಟರ್ ಗೋಲ್ಡ್‌ರಿಕ್, **ಪೂರ್ವೋಕ್ತ**, ಪುಟ. ೧೦

ಪಾಶ್ಚಾತ್ಯರ ಆಗಮನವು ದೇಶಿಯರಲ್ಲಿ ಭೌತಿಕ-ಬೌದ್ಧಿಕ ಬದಲಾವಣೆಯನ್ನು ತಂದಿತು. ಈ ಬದಲಾವಣೆಯನ್ನೆ ಬಹುಸಂಖ್ಯೆಯ ಭಾರತೀಯರು ಪ್ರಗತಿ ಎಂದು ಮನಗಂಡಿದ್ದಾರೆ. ಮತ್ತೆ ಕೆಲವರು ದೇಶಿ ಮೂಲದ ಬೌದ್ಧಿಕತೆ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ದಕ್ಕೆಯಾಯಿತು ಎನ್ನುತ್ತಾರೆ. ಬ್ರಿಟಿಷರು ದೇಶದ ಸಾಮಾಜಿಕ ಸುಧಾರಣೆಗೆ ಪೂರಕವಾದ ಕಾಯ್ದೆಗಳನ್ನು ಹೊರಡಿಸಿದರು ಮತ್ತು ಅವುಗಳನ್ನು ಬಿಗುವಿನ ಆಡಳಿತ ವ್ಯವಸ್ಥೆಯ ಮೂಲಕ ಜಾರಿಗೊಳಿಸಿದರು. ಮಿಷನರಿಗಳು ತಮ್ಮ ಕಾರ್ಯಕ್ಕೆ ಸ್ಪಂದಿಸುತ್ತಿದ್ದ ಬ್ರಿಟಿಷರ ಆಡಳಿತ ವ್ಯವಸ್ಥೆಯ ಚೌಕಟ್ಟಿನಲ್ಲಿಯೇ ಕಾರ್ಯನಿರ್ವಹಿಸಿದರು. ಮಿಷನರಿಗಳ ಮುಖ್ಯ ಗುರಿ ಮತ ಪ್ರಸಾರ ಮಾಡುವುದಾಗಿದ್ದರೂ, ಅದೊಂದಕ್ಕೆ ಅವರು ಅಂಟಿಕೊಳ್ಳದೆ ಶಿಕ್ಷಣ, ಭಾಷೆ, ವ್ಯಾಕರಣ, ಸಾಹಿತ್ಯ, ಮುದ್ರಣ, ಶಾಸನಗಳ ಸಂಗ್ರಹ, ಚರಿತ್ರೆ ರಚನೆ, ಆಸ್ಪತ್ರೆ, ಅನಾಥಾಲಯ ಸ್ಥಾಪನೆ, ಕೈಗಾರಿಕೆ, ಪತ್ರಿಕೋದ್ಯಮ ಮುಂತಾದವುಗಳಲ್ಲಿ ಗಮನಾರ್ಹ ಕೊಡುಗೆ ನೀಡಿದರು. ಹಾಗೆಂದು ಕ್ರೈಸ್ತ ಧರ್ಮವನ್ನು ಪ್ರಸಾರ ಮಾಡುವ ಮತ್ತು ಭಾರತೀಯ ಅನ್ಯ ಮತೀಯರನ್ನು ಕ್ರೈಸ್ತರನ್ನಾಗಿಸುವ ಉದ್ದೇಶವನ್ನು ಕೈಬಿಟ್ಟರು ಎಂದರ್ಥವಲ್ಲ. ತಮ್ಮ ಪ್ರತಿ ಕಾರ್ಯದಲ್ಲಿಯೂ ಒಂದಲ್ಲಾ ಒಂದು ರೀತಿಯಲ್ಲಿ ಕ್ರೈಸ್ತ ಧರ್ಮದೆಡೆಗೆ ಆಕರ್ಷಿಸುವ ಯತ್ನವನ್ನು ಮಾಡುತ್ತಲೇ ಇದ್ದರು. ಶಿಕ್ಷಣ, ಮುದ್ರಣ, ಆಸ್ಪತ್ರೆ ಮುಂತಾದ ಸೇವಾ ಅಸ್ತ್ರಗಳನ್ನು ಮಿಷನರಿಗಳು ತಮ್ಮ ಸೇವಾಕೇಂದ್ರಗಳಲ್ಲೆಲ್ಲಾ ಬಳಸಿಕೊಂಡರು. ಇದಕ್ಕೆ ಬಳ್ಳಾರಿಯೂ ಹೊರತಾಗಿಲ್ಲ. ಕ್ರಿ.ಶ. ೧೮೧೧ ರಿಂದ ಆದಿಯಾಗಿ ಇಂದಿನವರೆಗೆ ಮಿಷನರಿಗಳ ಕನ್ನಡ ಭಾಷೆ, ನಿಘಂಟು, ಸಾಹಿತ್ಯ, ಮುದ್ರಣ, ಶಿಕ್ಷಣ ಮತ್ತು ಮತಾಂತರ ಕ್ರಿಯೆಗಳಿಗೆ ಬಳ್ಳಾರಿಯು ಮಾದರಿ ಕೇಂದ್ರವಾಗಿದೆ. ಹಾಗಾಗಿ ಬಳ್ಳಾರಿ ಪ್ರಾದೇಶಿಕ ವ್ಯಾಪ್ತಿಯಲ್ಲಿ ಮಿಷನರಿಗಳು ಕೈಗೊಂಡ ಕಾರ್ಯಚಟುವಟಿಕೆಗಳನ್ನು ಅರಿಯದೆ, ಕೇವಲ ಅವರ ಬಗೆಗಿನ ಕಾಲಾನುಕ್ರಮ ಅಧ್ಯಯನ ಅಪೂರ್ಣವೆನ್ನಿಸುತ್ತದೆ. ಈ ಕಾರಣ ಬಳ್ಳಾರಿಗೆ ಅನ್ವಯಿಸಿದಂತೆ ಮಿಷನರಿಗಳ ಕಾರ್ಯಚಟುವಟಿಕೆಗಳನ್ನು ವಿವರಿಸುವುದು ಈ ಅಧ್ಯಾಯದ ಉದ್ದೇಶವಾಗಿದೆ.

### ೪.೧ ಶಿಕ್ಷಣ

ಭಾರತದಲ್ಲಿರುವ ಶಿಕ್ಷಣ ಇತಿಹಾಸವು ಪುರಾತನವಾದದ್ದು. ಈ ಶಿಕ್ಷಣವು ವೈದಿಕ ಧರ್ಮವನ್ನಾಧರಿಸಿ ನಡೆಯುತ್ತಿತ್ತು. ಇದೇ ರೀತಿ ಪಾಶ್ಚಾತ್ಯ ಶಿಕ್ಷಣವೂ ಮಿಷನರಿಗಳ ಮೂಲಕ ಕ್ರೈಸ್ತ ಧರ್ಮಕ್ಕೆ ಅಂಟಿಕೊಂಡಿರುವಂತಹದ್ದಾಗಿದೆ. ಭಾರತದಲ್ಲಿ ಮಿಷನರಿಗಳ ಶೈಕ್ಷಣಿಕ ಕಾರ್ಯಗಳು ಕ್ರಿ.ಶ. ೧೭ನೇ ಶತಮಾನದ ಪೂರ್ವದಲ್ಲಿಯೇ ಆರಂಭವಾಗಿದ್ದಿತು.[೧] ಇದಕ್ಕೂ ಪೂರ್ವದಲ್ಲಿ ಮಿಷನರಿಗಳಿಗೆ ತಮ್ಮ ಧರ್ಮ ಪ್ರಸಾರ ಉದ್ದೇಶವನ್ನು ಸುಲಭವಾಗಿ ಈಡೇರಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕಾರಣ ಭಾರತೀಯ ಜನತೆಯು ತನ್ನದೇ ಆದ ಸಾಂಸ್ಕೃತಿಕ ಪರಂಪರೆಯೊಂದನ್ನು ಹೊಂದಿದ್ದು, ಅವರನ್ನು ಆ ಚೌಕಟ್ಟಿನಿಂದ ಹೊರತರುವುದು ಕಷ್ಟಸಾಧ್ಯವಾಗಿತ್ತು. ಇಂತಹವರಲ್ಲಿ ಕ್ರೈಸ್ತ ಧರ್ಮದ ಬೀಜ ಬಿತ್ತುವುದು ಮಿಷನರಿಗಳಿಗೆ ಕಷ್ಟದ ಕೆಲಸವಾಯಿತು. ಈ ಕಾರ್ಯವನ್ನು ಸರಳಗೊಳಿಸಿಕೊಳ್ಳುವ ನಿಟ್ಟಿನಲ್ಲಿ ಮಿಷನರಿಗಳು ಬಳಸಿಕೊಂಡ ಅಸ್ತ್ರವೇ ಪಾಶ್ಚಾತ್ಯ ಶಿಕ್ಷಣ. ಸರ್. ಚಾರ್ಲ್ಸ್ ಗ್ರಾಂಟ್ (೧೭೯೨) ರವರು ನೀಡಿರುವ "ಪಾಶ್ಚಾತ್ಯ ಶಿಕ್ಷಣದ ಮುಖ್ಯ ಉದ್ದೇಶವೇ ಕ್ರೈಸ್ತ

ಧರ್ಮದ ಬಗ್ಗೆ ತಿಳಿಸುವುದು’’[೨] ಎಂಬ ಹೇಳಿಕೆಯು ಮೇಲಿನ ವಿವರಗಳಿಗೆ ಮತ್ತಷ್ಟು ಪುಷ್ಟಿನೀಡುತ್ತದೆ. ೧೮ನೇ ಶತಮಾನದ ಆದಿಯಲ್ಲಿಯೇ ಪಾಶ್ಚಾತ್ಯ ಶಿಕ್ಷಣವು ಭಾರತೀಯರನ್ನು ಆಕರ್ಷಿಸಿತು. ಇದಕ್ಕೆ ಕಾರಣ ಭಾರತೀಯ ಶಿಕ್ಷಣ ಪದ್ಧತಿಯಲ್ಲಿದ್ದ ದೌರ್ಬಲ್ಯಗಳೇ ಎನ್ನಬಹುದು. ಕೆಲವೇ ಉನ್ನತ ವರ್ಗಕ್ಕೆ ಸೀಮಿತವಾಗಿದ್ದ ಸ್ಥಳೀಯ ಶಿಕ್ಷಣವು ಸಾಮೂಹಿಕ ಶಿಕ್ಷಣವನ್ನು ನಿರ್ಲಕ್ಷಿಸಿದ್ದಿತು.[೩] ಶ್ರೀ ಧರಂಪಾಲ್‌ರವರು ತಮ್ಮ ‘ದಿ ಬ್ಯೂಟಿಫುಲ್ ಇಂಡಿಜೀನಸ್, ಇಂಡಿಯನ್ ಎಜುಕೇಷನ್ ಇನ್ ದಿ ೧೮ ಸೆಂಚುರಿ’ ಎಂಬ ಕೃತಿಯಲ್ಲಿ ಗುರುಕುಲ ಶಿಕ್ಷಣದ ಆರಂಭವನ್ನು ಕುರಿತು ಬಳ್ಳಾರಿ ಕಲೆಕ್ಟರ್ ಒಬ್ಬರು ನೀಡಿರುವ ಹೇಳಿಕೆಯನ್ನು ಉಲ್ಲೇಖಿಸಿದ್ದಾರೆ. ‘‘ಹಿಂದೂ ಬಾಲಕರ ವಿದ್ಯಾಭ್ಯಾಸವು ಸಾಮಾನ್ಯವಾಗಿ ಅವರು ಐದು ವರ್ಷದವರಾಗಿರುವಾಗ ಪ್ರಾರಂಭವಾಗುತ್ತದೆ. ಈ ವಯಸ್ಸು ಬಂದೊಡನೆ ಬಾಲಕನನ್ನು ಯಾವ ಶಾಲೆಗೆ ಕಳುಹಿಸಬೇಕೋ ಅಲ್ಲಿಯ ಗುರುವನ್ನು ಇತರ ವಿದ್ವಾಂಸರನ್ನು ಬಾಲಕನ ತಂದೆ-ತಾಯಿ ತಮ್ಮ ಮನೆಗೆ ಆಹ್ವಾನಿಸುತ್ತಾರೆ. ಒಂದು ವಿಗ್ರಹದ ಸುತ್ತಾ ಎಲ್ಲರೂ ಕುಳಿತುಕೊಳ್ಳುತ್ತಾರೆ. ದೀಕ್ಷೆ ಪಡೆಯಬೇಕಾಗಿರುವ ಬಾಲಕನನ್ನು ಅದರ ಮುಂದೆ ಕುಳ್ಳಿರಿಸುತ್ತಾರೆ. ಗುರುವು ಪಕ್ಕದಲ್ಲಿ ಕುಳಿತು ವಿಗ್ರಹಕ್ಕೆ ಧೂಪವನ್ನು ಉರಿಸಿ, ನೈವೇದ್ಯ ಮಾಡಿ, ಆಮೇಲೆ ಜ್ಞಾನವನ್ನು ಅಕ್ಕಿಯನ್ನು ಹರಡಿ ಅದರ ಮೇಲೆ ಮಗುವಿನ ಬೆರಳಿನಿಂದ ದೇವರ ಹೆಸರನ್ನು ಬರೆಯಿಸುತ್ತಾರೆ. ಮರುದಿನ ಬೆಳಿಗ್ಗೆ ಅವನ ವಿದ್ಯಾಭ್ಯಾಸದ ಕಾರ್ಯವು ಆರಂಭವಾಗುತ್ತದೆ.’’[೪]ಇದು ಉಪನಯನ ಸಂಸ್ಕಾರದ ವಿವರಣೆ ಎಂದೆನಿಸಿದರೂ ಬಳ್ಳಾರಿ ಕಲೆಕ್ಟರೊಬ್ಬರು ನೀಡಿದ ವಿವರಣೆಯಾದ್ದರಿಂದ ಬಹುಶಃ ಮಿಷನರಿಗಳ ಆಗಮನದ ಪೂರ್ವದಲ್ಲಿ ಬಳ್ಳಾರಿ ಪ್ರದೇಶದಲ್ಲಿ ಇದ್ದಿರಬಹುದಾದ ಶಿಕ್ಷಣ ಪದ್ಧತಿಯನ್ನು ಈ ಮೂಲಕ ತಿಳಿದಂತಾಗುತ್ತದೆ ಎಂಬ ಕಾರಣಕ್ಕಾಗಿ ನೀಡಲಾಗಿದೆ.

ದೇಶೀಯ ಶಿಕ್ಷಣದಲ್ಲಿ ಮಹಾಕಾವ್ಯಗಳು, ಕುಮಾರವ್ಯಾಸ ಭಾರತ, ಜೈಮಿನಿ ಭಾರತ, ಹರಿಭಕ್ತಿಸಾರ, ಬಸವಪುರಾಣ ಮುಂತಾದವುಗಳು ಬೋಧನ ವಿಷಯಗಳಾಗಿದ್ದವು. ಇವುಗಳನ್ನು ಕಂಠಪಾಠ ರೂಪದಲ್ಲಿ ಬೋಧಿಸಲಾಗುತ್ತಿತ್ತು. ಇಂತಹ ಕಂಠಪಾಠ ಶಾಲೆಗಳನ್ನು ಮಿಷನರಿಗಳು ಪಿಯರ್(Pier) ಶಾಲೆಗಳೆಂದು ಕರೆಯುತ್ತಿದ್ದರು.[೫] ಬ್ರಿಟಿಷ್ ಸರ್ಕಾರಕ್ಕಿಂತ ಮೊದಲು ಶಿಕ್ಷಣ ಕೇಂದ್ರಗಳನ್ನು ಆರಂಭಿಸಿದ ಮಿಷನರಿಗಳು, ತಮ್ಮ ಶಾಲೆಗಳಲ್ಲಿ ಸಾಮಾನ್ಯ ಜ್ಞಾನ, ಸರಳ ವ್ಯಾಕರಣ, ಏಷ್ಯಾದ ಭೂಗೋಳ, ಗಣಿತದ ಸರಳ ನಿಯಮಗಳು ಮತ್ತು ಈಸೋಪನ ಕಥೆಗಳನ್ನು ಪಠ್ಯಗಳಾಗಿ ಬೋಧಿಸಲು ಆರಂಭಿಸಿದರು. ಹೀಗೆ ಒಂದೊಂದಾಗಿ ಬೈಬಲಿನ ಭಾಗಗಳನ್ನು ಪಠ್ಯಗಳಾಗಿ ಜಾರಿಗೆ ತಂದರು. ಮಿಷನರಿಗಳು ಭಾರತದಲ್ಲಿ ಮುದ್ರಣ ಕಲೆಯನ್ನು ಆರಂಭಿಸಿದ ಮೇಲಂತೂ, ತಮ್ಮ ಮುದ್ರಣ ಕೇಂದ್ರಗಳ ಮೂಲಕ ಈ ಶಾಲಾ ಪಠ್ಯಗಳನ್ನು ಮುದ್ರಿಸಿ ಮಕ್ಕಳ ಅಭ್ಯಾಸಕ್ಕೆ ಒದಗಿಸಿದರು. ಬೈಬಲನ್ನು ಕೇವಲ ಮಿಷನರಿಗಳ ಶಾಲೆಗಳಲ್ಲಿ ಮಾತ್ರವಲ್ಲದೆ ಸರ್ಕಾರಿ ಶಾಲೆಗಳಲ್ಲೂ ಪರಿಚಯಿಸಿದ್ದರು. ಈ ಶಾಲೆಗಳಲ್ಲೂ ಪಾದ್ರಿಯೊಬ್ಬರಿಂದ ಬೈಬಲ್‌ನ ಬೋಧನೆ ಮತ್ತು ಪಠಣ ಕಾರ್ಯ ಸಾಗುತ್ತಿತ್ತು. ಮಿಷನರಿ ಶಾಲೆಗಳಲ್ಲಿ ಓದುತ್ತಿದ್ದ ಮಕ್ಕಳಿಗೆ ನಿಮ್ಮ ದೇವರು ಯಾರು? ನಿಮ್ಮ ಉದ್ಧಾರಕ ಯಾರು? ಎಂಬ ಪ್ರಶ್ನೆಗಳಿಗೆ ‘ಯೇಸು’ ಎಂದು ಉತ್ತರಿಸುವಂತೆ ಬೋಧಿಸಲಾಗುತ್ತಿತ್ತು. ಅಲ್ಲದೆ ಈ ಶಾಲೆಗಳ ಮೇಲ್ವಿಚಾರಕರಾದ ಶಾಲಾ ಡೆಪ್ಯುಟಿ ಇನ್‌ಸ್ಪೆಕ್ಟರ್ ಸಹ ಹೆಚ್ಚಾಗಿ ಸ್ಥಳೀಯ ಪಾದ್ರಿಗಳಾಗಿರುತ್ತಿದ್ದರು.[೬] ಹೀಗಾಗಿ ಶಾಲೆಗಳಲ್ಲಿ ಧರ್ಮ ಬೋಧನೆ ಯಾವ ಅಡೆತಡೆಗಳಿಲ್ಲದೆ ಸರಾಗವಾಗಿ ನಡೆಯಲು ಸಾಧ್ಯವಾಯಿತು.

ಮಿಷನರಿಗಳು ಆರಂಭದಲ್ಲಿ ನೀಡಲಾರಂಭಿಸಿದ ಬಾಲಕಿಯರಿಗಾಗಿನ ಶಿಕ್ಷಣವನ್ನು ಹಲವರು ವಿರೋಧಿಸಿದರು. ಮತ್ತು ಬಾಲಕಿಯರಿಗೆ ಶಿಕ್ಷಣ ನೀಡುವ ಈ ಕ್ರಮವು ‘ಭಾರತೀಯರ ಜನಾನ(ಸ್ತ್ರೀಯರ ಕೋಣೆ)ವನ್ನು ಆಕ್ರಮಿಸುವ ಯತ್ನ’ ಎಂದು ಸಂಪ್ರದಾಯವಾದಿಗಳು ಟೀಕಿಸಿದರು. ಈ ಎಲ್ಲಾ ವಿರೋಧಗಳ ಮಧ್ಯೆಯೂ ಮಿಷನರಿಗಳು ತಮ್ಮ ಬಾಲಕಿಯರ ಶಾಲೆಗಳಲ್ಲಿ ಕ್ರೈಸ್ತ ಧರ್ಮ ಬೋಧೆಯನ್ನು ಕಡ್ಡಾಯಗೊಳಿಸಿದ್ದರು. ಕೆಲ ಮಿಷನರಿ ಶಾಲೆಗಳು ತಮ್ಮ ಶಾಲೆಯ ನಡಾವಳಿಯಲ್ಲಿ ‘‘ಕೆಲವರು ದೇವರ ಆರಾಧನೆಯನ್ನು ಕೀಳಾಗಿ ಭಾವಿಸಿ ಅದನ್ನು

ಅಪವಿತ್ರಗೊಳಿಸುವಲ್ಲಿ ತೊಡಗಿದ್ದಾರೆ, ಅಂತಹವರಿಗೆ ನಿಜವಾದ ದೇವರೆನಿಸಿದ ಯೇಸುಕ್ರಿಸ್ತನ ಬಗ್ಗೆ ಜ್ಞಾನ ನೀಡಲಾಗುವುದು.''[೭] ಎಂದು ಉಲ್ಲೇಖಿಸುವ ಮೂಲಕ ತಾವು ನೀಡುವ ಶಿಕ್ಷಣದ ಉದ್ದೇಶವನ್ನು ನೇರವಾಗಿ ವ್ಯಕ್ತಪಡಿಸಿದ್ದಾರೆ. ಹೀಗೆ ಹದಿನೇಳನೇ ಶತಮಾನದ ಪೂರ್ವದಿಂದ ಮಿಷನರಿಗಳು ಶಿಕ್ಷಣವನ್ನು ನೀಡುತ್ತಾ ಬಂದಿದ್ದಾರೆ. ಆದರೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಮಾತ್ರ ಈ ಗೊಡವೆಗೆ ಹೋಗಿರಲಿಲ್ಲ.

ಬ್ರಿಟಿಷ್ ಪಾರ್ಲಿಮೆಂಟ್ ೧೮೧೩ ರ ಚಾರ್ಟರ್ ಕಾಯ್ದೆಯಲ್ಲಿ ಈಸ್ಟ್ ಇಂಡಿಯಾ ಕಂಪೆನಿಯು ಇನ್ನು ಮುಂದೆ ತನ್ನ ಆದಾಯದಲ್ಲಿ ಒಂದು ಲಕ್ಷ ರೂಪಾಯಿಗಳನ್ನು ಶಿಕ್ಷಣಕ್ಕಾಗಿ ನಿಯೋಜಿಸಬೇಕು ಎಂದು ಆದೇಶಿಸಿತು.[೮] ಈ ಹೊತ್ತಿಗಾಗಲೆ ಬಳ್ಳಾರಿಯಲ್ಲಿ ಬಹುಮಟ್ಟಿಗೆ ಪ್ರತಿ ಹಳ್ಳಿಯಲ್ಲೂ ಒಂದು ಶಾಲೆ ಇದ್ದಿತೆಂದು ಸಮಕಾಲೀನ ಕರ್ನಾಟಕದ ಬ್ರಿಟಿಷ್ ಆಡಳಿತದ ಇತಿಹಾಸದಲ್ಲಿ ಪ್ರಮುಖ ಸ್ಥಾನ ಹೊಂದಿದ್ದ ಥಾಮಸ್ ಮನ್ರೊ ತನ್ನ ವರದಿಯಲ್ಲಿ ತಿಳಿಸಿದ್ದಾನೆ.[೯] ೧೮೩೫ ರಲ್ಲಿ ಲಾರ್ಡ್ ಮೆಕಾಲೆ ವರದಿ ಆಧರಿಸಿ 'ಇಂಗ್ಲಿಷ್ ಎಜುಕೇಷನ್ ಆ್ಯಕ್ಟ್'ನ್ನು ಹೊರಡಿಸಲಾಯಿತು.[೧೦] ಭಾರತದ ಶಿಕ್ಷಣ ಸುಧಾರಣೆಯಲ್ಲಿ ಮೆಕಾಲೆ ವರದಿಯು ಪ್ರಮುಖವಾದದ್ದು. ಆದರೂ ಇದು ಪ್ರಯೋಗಾತ್ಮಕ ಉದ್ದೇಶದಿಂದ ಕೂಡಿತ್ತು ಎಂಬುದು ಡಾ ಸಿ. ಎನ್. ರಾಮಚಂದ್ರನ್‌ರವರ ಅಭಿಪ್ರಾಯ. ಇವರು ಮುಂದುವರೆಯುತ್ತಾ 'ಇಂಗ್ಲಿಷ್ ಒಂದು ಶೈಕ್ಷಣಿಕ ಶಿಸ್ತಿನಂತೆ ಅಧ್ಯಯನಕ್ಕೆ ಒಳಪಟ್ಟಿದ್ದು ಭಾರತದಲ್ಲಿಯೇ ಹೊರತು ಇಂಗ್ಲೆಂಡಿನಲ್ಲಲ್ಲ' ಎಂದು ತಿಳಿಸುತ್ತಾರೆ.[೧೧] ಮೆಕಾಲೆ ವರದಿ ಬಂದ ನಂತರ ಭಾರತದ ಶಿಕ್ಷಣ ವ್ಯವಸ್ಥೆಯು ಆಯಾ ಪ್ರೆಸಿಡೆನ್ಸಿಗಳ ವ್ಯಾಪ್ತಿಗೆ ಸೇರಿತು. ಮದ್ರಾಸ್ ಪ್ರೆಸಿಡೆನ್ಸಿಯು ಕಾಲಕಾಲಕ್ಕೆ ಮದ್ರಾಸ್ ಎಲಿಮೆಂಟರಿ ಆ್ಯಕ್ಟ್-೧೮೬೩, ಮದ್ರಾಸ್ ಮುನ್ಸಿಪಲ್ ಆ್ಯಕ್ಟ್-೧೮೭೧, ಲೋಕಲ್ ಫಂಡ್ಸ್ ಆ್ಯಕ್ಟ್-೧೮೭೧ ಮುಂತಾದ ಕಾಯ್ದೆಗಳನ್ನು ಹೊರಡಿಸುವ ಮೂಲಕ ಪ್ರಾಥಮಿಕ ಶಿಕ್ಷಣ ಸುಧಾರಣೆಗೆ ಆಸಕ್ತಿ ತೋರಿದರು. ಮದ್ರಾಸ್ ಪ್ರೆಸಿಡೆನ್ಸಿ ಜಿಲ್ಲಾ ಆಡಳಿತವು ತಳೆದಿದ್ದ ಆಸಕ್ತಿಯ ಜಿಲ್ಲೆಗಳಲ್ಲಿ ಬಳ್ಳಾರಿಯೂ ಒಂದಾಗಿತ್ತು. ಆ ಕಾರಣ ೧೮೮೦-೮೧ ರ ಹೊತ್ತಿಗೆ ಬಳ್ಳಾರಿಯಲ್ಲಿ ಒಟ್ಟು ೭೨೬ ಶಿಕ್ಷಣ ಕೇಂದ್ರಗಳು ಇದ್ದವು.[೧೨] ೧೮೮೨ ರಲ್ಲಿ 'ಇಂಡಿಯನ್ ಎಜುಕೇಷನ್ ಕಮಿಷನ್' ಸರ್ಕಾರಕ್ಕೆ ಉತ್ತಮವಾದ ಶಾಲೆಕಾಲೇಜುಗಳನ್ನು ಮಾತ್ರ ನಡೆಸುವಂತೆ ಶಿಫಾರಸ್ಸು ಮಾಡಿತು. ಇದನ್ನು ಅನುಕರಿಸಿದ ಮಿಷನರಿಗಳು ಕ್ರೈಸ್ತ ಧರ್ಮೀಯರಿಗೆ ಮಾತ್ರವೆಂಬಂತೆ ಶಾಲೆಗಳನ್ನು ತೆರೆದರು. ನಂತರ ಸ್ಥಳೀಯರ ಬೇಡಿಕೆಯ ಕಾರಣವಾಗಿ ಸರ್ವರಿಗೂ ಪ್ರವೇಶವು ಮುಕ್ತವಾಗಿಸಿದರು.[೧೩]

ಮಿಷನರಿಗಳ ಶಿಕ್ಷಣ ಇತಿಹಾಸವು ಬಳ್ಳಾರಿಗೆ ಸಂಬಂಧಿಸಿದಂತೆ ಕ್ರಿ.ಶ. ೧೮೧೧ ರಿಂದ ಆರಂಭವಾಗುತ್ತದೆ. ಪ್ರಾಟೆಸ್ಟೆಂಟ್‌ನ ಆದ್ಯ ಮಿಷನರಿಯಾದ ಜಾನ್ ಹ್ಯಾಂಡ್ಸರು ಅನಾಥಾಲಯ ಮಕ್ಕಳಿಗೆ ಶಿಕ್ಷಣ ನೀಡಲು ಆರಂಭಿಸಿದರು. ಇದು ಬಳ್ಳಾರಿ ನೆಲದಲ್ಲಿ ಸ್ಥಾಪನೆಯಾದ ಮೊಟ್ಟಮೊದಲ ಶಿಕ್ಷಣ ಕೇಂದ್ರವಾಗಿದೆ. ನಂತರ ಇದೇ ಮಿಷನರಿಯು ೧೮೧೫ ರಲ್ಲಿ ಮಿಷನ್ ತೋಟದಲ್ಲಿ ಕನ್ನಡ ಶಾಲೆಯನ್ನು ಆರಂಭಿಸಿತು. ಈ ಮೊದಲೇ ಹೇಳಿದಂತೆ ೧೮೧೬ ರಲ್ಲಿ ಕೇಂದ್ರ ಇಂಗ್ಲಿಷ್ ಶಾಲೆಯನ್ನು ಆರಂಭಿಸಿದರು. ಉತ್ತಮ ಗುಣಮಟ್ಟದ ಈ ಶಾಲೆಯು ಆಂಗ್ಲ ಮಕ್ಕಳಿಗೆ ಮಾತ್ರ ಸೀಮಿತವಾಗಿತ್ತು. ಅನಂತರ ಪ್ರತಿಭಾವಂತ ದೇಶಿ ಮಕ್ಕಳಿಗೂ ಪ್ರವೇಶ ದೊರೆಯಿತು. ಈ ಶಾಲೆಯ ಅಸ್ತಿತ್ವವನ್ನು ಇಂದಿಗೂ ನಾವು ಬಳ್ಳಾರಿಯಲ್ಲಿ ಬೇರೊಂದು ರೂಪದಲ್ಲಿ ಕಾಣಬಹುದಾಗಿದೆ. ಮದ್ರಾಸ್ ಮತ್ತು ಮೈಸೂರು ಶಿಕ್ಷಣ ಇತಿಹಾಸದಲ್ಲಿಯೇ ಪ್ರಥಮ ಬಾಲಕಿಯರ ಪ್ರಾಥಮಿಕ ಶಾಲೆಯು ಹ್ಯಾಂಡ್ಸ್ ಎಂಬ ಮಿಷನರಿಯಿಂದ ೧೮೨೧ ರಲ್ಲಿ ಬಳ್ಳಾರಿ ಕೋಟೆಯ ಮಿಷನ್ ಕೇಂದ್ರದಲ್ಲಿ ಆರಂಭವಾಯಿತು. ಕನ್ನಡ ಮಾಧ್ಯಮದ ಈ ಶಾಲೆಗೆ ನಂತರ 'ಲಂಡನ್ ಮಿಷನ್ ಟ್ರಿನಿಟಿ ಶಾಲೆ' ಎಂದು ನಾಮಕರಣ ಮಾಡಲಾಯಿತು. ಜಾನ್ ಹ್ಯಾಂಡ್ಸ್‌ರ ಉತ್ತರಾಧಿಕಾರಿಯಾಗಿ ಬಂದ ಜಾನ್ ರೀಡ್‌ರವರು ಮುದ್ರಣ ಕಾರ್ಯಕ್ಕೆ ಮಾತ್ರ ಒತ್ತು ನೀಡಿದರು. ಈ ನಂತರ ಬಂದ ಜಾನ್ ಸ್ಮಿತ್ ವಾರ್ಡ್‌ಲಾರವರು ಶಿಕ್ಷಣಕ್ಕಾಗಿ ಕಾರ್ಯನಿರ್ವಹಿಸಿದ ಮಿಷನರಿಯಾಗಿ ಕಂಡುಬರುತ್ತಾರೆ. ಈ ಮೊದಲು ೧೮೧೬ ರಲ್ಲಿ ಸ್ಥಾಪನೆಯಾಗಿದ್ದ ಕೇಂದ್ರ ಇಂಗ್ಲಿಷ್ ವಿದ್ಯಾಶಾಲೆಯ ಪ್ರಗತಿಯನ್ನು ಕಂಡು, ಇದೇ ಶಾಲೆಯ ಮುಂದುವರೆದ ತರಗತಿಗಳ ಭಾಗಗಳಾಗಿ ಪ್ರೌಢಶಾಲೆಯನ್ನು

ಸ್ಥಾಪಿಸಿದರು. ಇದಕ್ಕಾಗಿ ನೂತನ ಕಟ್ಟಡವನ್ನು ೧೮೪೬ ರ ಆಗಸ್ಟ್‌ನಲ್ಲಿ ನಿರ್ಮಿಸಿದರು. ಇದುವೇ ಇಂದು ವಾರ್ಡ್‌ಲಾ ಶಾಲೆ, ವಾರ್ಡ್‌ಲಾ ಕಾಲೇಜು ಎಂದು ಬಳ್ಳಾರಿಯಲ್ಲಿ ಹೆಸರುವಾಸಿಯಾಗಿದೆ. ವಾರ್ಡ್‌ಲಾರವರು ಸ್ಥಾಪಿಸಿದ ಮತ್ತೊಂದು ಶಾಲೆಯೆಂದರೆ ಇಂದಿನ ಸತ್ಯನಾರಾಯಣಪೇಟೆಯಲ್ಲಿರುವ 'ಲಂಡನ್ ಮಿಷನ್ ಆಂಗ್ಲೋ ವರ್ನಾಕುಲರ್' ಶಾಲೆಯಾಗಿದೆ. ಕೋಟೆ ಪ್ರದೇಶದಲ್ಲಿದ್ದ ಸ್ಥಳೀಯ ನಿವಾಸಿಗಳನ್ನು ಅಲ್ಲಿಂದ ವರ್ಗಾಯಿಸಲ್ಪಟ್ಟು ನಿರ್ಮಾಣವಾದಂತ ಸತ್ಯನಾರಾಯಣಪೇಟೆಯಲ್ಲಿ ದೇಶೀ ಮಕ್ಕಳಿಗಾಗಿ ಈ ಶಾಲೆಯನ್ನು ಆರಂಭಿಸಲಾಗಿದ್ದಿತು. ೧೮೯೦ ರಲ್ಲಿ ಬಳ್ಳಾರಿಯಲ್ಲಿ ಮಿಷನರಿಯಾಗಿದ್ದ ರೆ. ಎಫ್. ಹೆಚ್. ಬ್ರೌನ್‌ರವರು ಕುಡುತಿನಿಯಲ್ಲೊಂದು ಲಂಡನ್ ಮಿಷನ್ ಶಾಲೆಯನ್ನು ಮತ್ತು ೧೮೯೮ ರಲ್ಲಿ ಸಂಡೂರಿನಲ್ಲೊಂದು ಲಂಡನ್ ಮಿಷನ್ ಬಾಲಕಿಯರ ಪ್ರಾಥಮಿಕ ಶಾಲೆಯನ್ನು ಆರಂಭಿಸಿದರು. ಇದರೊಟ್ಟಿಗೆ ಬಡಮಕ್ಕಳಿಗಾಗಿ ವಸತಿನಿಲಯಗಳನ್ನು ಸ್ಥಾಪಿಸಿದರು. ವಸತಿನಿಲಯಗಳ ನಿರ್ವಹಣೆಯೂ ಮಿಷನರಿಗಳ ಶಿಕ್ಷಣಕ್ಕಾಗಿನ ಪೂರಕ ಕಾರ್ಯಗಳೆಂದು ಇಲ್ಲಿ ಪರಿಗಣಿಸಲಾಗಿದೆ. ಹೀಗೆ ಲಂಡನ್ ಮಿಷನ್ ಸೊಸೈಟಿಯು ತನ್ನ ಮಿಷನರಿಗಳ ಮೂಲಕ ಬಳ್ಳಾರಿಯಲ್ಲಿ ಶಾಲೆಗಳನ್ನು, ವಸತಿನಿಲಯಗಳನ್ನು ತೆರೆದು ರಾಜ್ಯದಲ್ಲಿ ಶೈಕ್ಷಣಿಕ ಸೇವೆ ಆರಂಭಿಸಿದ ಮೂಲ ಮಿಷನ್ ಆಗಿದೆ. ಇವರಿಂದ ಆರಂಭವಾದ ಶಿಕ್ಷಣ ಮತ್ತು ವಸತಿಕೇಂದ್ರಗಳು ಈ ಕೆಳಗಿನಂತಿವೆ.[೧೪]

**ಲಂಡನ್ ಮಿಷನ್ನಿನ ಮಿಷನರಿಗಳು ಸ್ಥಾಪಿಸಿದ ಶಿಕ್ಷಣ ಕೇಂದ್ರಗಳು**

| ಕ್ರ.ಸಂ. | ಶಾಲೆಯ ಹೆಸರು | ವಿಳಾಸ | ವರ್ಷ | ಸ್ಥಾಪಕರು |
|---|---|---|---|---|
| ೧ | ಅನಾಥರ ಶಾಲೆ | ಮಿಷನ್ ಕೇಂದ್ರ,ಬಳ್ಳಾರಿ | ೧೮೧೧ | ಜಾನ್ ಹ್ಯಾಂಡ್ಸ್ |
| ೨ | ಇಂಗ್ಲಿಷ್ ಶಾಲೆ ಸೈನಿಕ ಮಕ್ಕಳಿಗಾಗಿ | ಕೋಟೆ ಪ್ರದೇಶ, ಬಳ್ಳಾರಿ | ೧೮೧೧ | ಜಾನ್ ಹ್ಯಾಂಡ್ಸ್ |
| ೩ | ಕನ್ನಡ ಶಾಲೆ | ಮಿಷನ್ ತೋಟ, ಬಳ್ಳಾರಿ | ೧೮೧೫ | ಜಾನ್ ಹ್ಯಾಂಡ್ಸ್ |
| ೪ | ಕೇಂದ್ರ ಇಂಗ್ಲಿಷ್ ವಿದ್ಯಾಶಾಲೆ, | ಕೋಟೆ, ಬಳ್ಳಾರಿ | ೧೮೧೬ | ಜಾನ್ ಹ್ಯಾಂಡ್ಸ್ |
| ೫ | ಬಾಲಕಿಯರ ಹಿರಿಯ ಪ್ರಾಥಮಿಕ ಶಾಲೆ | ಮಿಷನ್ ತೋಟ, ಕೋಟೆ, ಬಳ್ಳಾರಿ | ೧೮೨೧ | ಜಾನ್ ಹ್ಯಾಂಡ್ಸ್ |
| ೬ | ವಾರ್ಡ್‌ಲಾ ಪ್ರೌಢಶಾಲೆ | ಮಿಷನ್ ತೋಟ, ವಾರ್ಡ್‌ಲಾ ಆವರಣ, ಬಳ್ಳಾರಿ, | ೧೮೪೬ | ಜಾನ್‌ಸ್ಮಿತ್ ವಾರ್ಡ್‌ಲಾ |
| ೭ | ಲಂಡನ್ ಮಿಷನ್ ಆಂಗ್ಲೋ ವರ್ನಾಕುಲರ್ ಶಾಲೆ | ಸತ್ಯನಾರಾಯಣಪೇಟೆ, ಬಳ್ಳಾರಿ | ೧೮೪೮ | ಜಾನ್‌ಸ್ಮಿತ್ ವಾರ್ಡ್‌ಲಾ |
| ೮ | ಲಂಡನ್ ಮಿಷನ್ ಪ್ರಾಥಮಿಕ ಶಾಲೆ | ಕುಡುತಿನಿ | ೧೮೯೦ | ರೆ. ಎಫ್. ಹೆಚ್. ಬ್ರೌನ್ |
| ೯ | ಲಂಡನ್ ಮಿಷನ್ ಬಾಲಕಿಯರ ಶಾಲೆ | ಸಂಡೂರು | ೧೮೯೮ | ರೆ. ಎಫ್. ಹೆಚ್. ಬ್ರೌನ್ |

**ಲಂಡನ್ ಮಿಷನ್ನಿನ ಮಿಷನರಿಗಳು ಸ್ಥಾಪಿಸಿದ ವಸತಿನಿಲಯಗಳು**

| ಕ್ರ.ಸಂ. | ಶಾಲೆಯ ಹೆಸರು | ವಿಳಾಸ | ವರ್ಷ | ಸ್ಥಾಪಕರು |
|---|---|---|---|---|
| ೧ | ಬಾಲಕರ ವಸತಿನಿಲಯ | ಮಿಷನ್ ತೋಟ ಬಳ್ಳಾರಿ | ೧೮೩೦ | ಜಾನ್ ಹ್ಯಾಂಡ್ಸ್ |
| ೨ | ಬಾಲಕಿಯರ ವಸತಿನಿಲಯ | ಮಿಷನ್ ತೋಟ ಬಳ್ಳಾರಿ | ೧೮೩೦ | ಜಾನ್ ಹ್ಯಾಂಡ್ಸ್ |

| | | | | |
|---|---|---|---|---|
| ೩ | ಅನಾಥ ಬಾಲಕಿಯರ ವಸತಿಗೃಹ ಇಂದು ಸಿ ಎಸ್ ಐ ಬಾಲಕಿಯರ ವಸತಿಗೃಹ | ಸತ್ಯನಾರಾಯಣಪೇಟೆ ಬಳ್ಳಾರಿ | ೧೮೯೩ | ರೆ. ಎಫ್. ಹೆಚ್. ಬ್ರೌನ್ |
| ೪ | ಅನಾಥ ಬಾಲಕರ ವಸತಿನಿಲಯ | ಪಾರ್ವತಿ ನಗರ, ಬಳ್ಳಾರಿ | ೧೮೯೬ | ರೆ. ಎಫ್. ಹೆಚ್. ಬ್ರೌನ್ |
| ೫ | ಸಿ ಎಸ್ ಐ ಪ್ರೇಮನಿವಾಸ ಬಾಲಕರ ವಸತಿನಿಲಯ | ಹಾಲ್ವಿ ಗ್ರಾಮ | ೧೯೬೦ | ರೆ. ಎನ್. ಸಭಾಪತಿ |
| ೬ | ಸಿ ಎಸ್ ಐ ಪ್ರೀತಿ ನಿವಾಸ ಬಾಲಕರ ವಸತಿನಿಲಯ | ಹಚ್ಚೊಳ್ಳಿ | ೧೯೬೭ | ರೆ. ಎನ್. ಸಭಾಪತಿ |
| ೭ | ಕ್ರೈಸ್ತನಿವಾಸ ಬಾಲಕಿಯರ ವಸತಿನಿಲಯ | ಹೊಸಪೇಟೆ | ೧೯೮೧ | ರೆ. ಪಿ. ಡೇವಿಡ್ |

ಈ ಮೇಲಿನ ಪಟ್ಟಿಯಿಂದ ಪ್ರಾಟೆಸ್ಟಂಟ್‌ರ ಲಂಡನ್ ಮಿಷನ್ನಿನ ಶೈಕ್ಷಣಿಕ ಕಾರ್ಯಗಳು ಬೇರೆಲ್ಲಾ ಮಿಷನ್ನುಗಳಿಗಿಂತ ಮೊದಲನೆಯದೆಂದು ತಿಳಿದುಬರುತ್ತದೆ. ಆದರೆ ಪ್ರಸ್ತುತ ಬಳ್ಳಾರಿಯಲ್ಲಿನ ಕ್ಯಾಥೊಲಿಕ್ ಶಿಕ್ಷಣಕಾರ್ಯಗಳಿಗೆ ಹೋಲಿಸಿದರೆ ಪ್ರಾಟೆಸ್ಟೆಂಟರ ಶಿಕ್ಷಣಕಾರ್ಯಗಳ ಪ್ರಮಾಣ ಕಡಿಮೆಯೆಂದೇ ಹೇಳಬಹುದು.

ಕ್ಯಾಥೊಲಿಕರ ಮಿಷನ್‌ಗಳು ಬಳ್ಳಾರಿಗೆ ತಡವಾಗಿ ಆಗಮಿಸಿದ ಕಾರಣ ಪ್ರಾಟೆಸ್ಟೆಂಟರಿಗಿಂತ ಇವರ ಶೈಕ್ಷಣಿಕ ಕಾರ್ಯಗಳು ಬಳ್ಳಾರಿಗೆ ಸಂಬಂಧಿಸಿದಂತೆ ತಡವಾಗಿ ಪ್ರಾರಂಭಗೊಂಡವೆಂದು ಹೇಳಬಹುದು. ಆದರೂ ಇಂದು ಬಳ್ಳಾರಿಯಲ್ಲಿರುವ ಹೆಚ್ಚಿನ ಕ್ರೈಸ್ತರ ಶಿಕ್ಷಣಕೇಂದ್ರಗಳು ಕ್ಯಾಥೊಲಿಕ್ ಮಿಷನರಿಗಳಿಂದ ಆರಂಭವಾದಂತವುಗಳು. ಈ ಪಂಥದ ಪ್ರಥಮ ಸಕ್ರಿಯ ಮಿಷನರಿ ಎನಿಸಿದ ಫಾ. ಪ್ಯಾಟ್ರಿಕ್ ದೋಯಲ್‌ರವರು ೧೮೪೪ ರಲ್ಲಿ ಬಳ್ಳಾರಿಯಲ್ಲಿ ಶಾಲೆಯೊಂದನ್ನು ಆರಂಭಿಸುವ ಮೂಲಕ ಕ್ಯಾಥೊಲಿಕ್‌ರ ಶಿಕ್ಷಣ ಸೇವೆಗೆ ನಾಂದಿ ಹಾಡಿದರು.[೧೫] ೧೮೫೬ ರ ಸುಮಾರಿನಲ್ಲಿ ಸರ್ಕಾರದ ಅನುಮತಿ ಪಡೆದು ಬಳ್ಳಾರಿಯ ಕಂಟೋನ್‌ಮೆಂಟ್ ಚರ್ಚಿನ ಬಳಿ ಸಂತ ಜೋಸೆಫರ ಶಾಲೆಯನ್ನು ಸ್ಥಾಪಿಸಿದರು. ಇದನ್ನು ಯುರೋಪಿಯನ್ನರ ಮತ್ತು ಆಂಗ್ಲೋ-ಇಂಡಿಯನ್ನರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ತೆರೆಯಲಾಯಿತು. ನಂತರ ಭಾರತೀಯ ಅನಾಥ ಮಕ್ಕಳನ್ನು ಈ ಶಾಲೆಗೆ ಸೇರಿಸಿಕೊಳ್ಳಲಾಯಿತು. ಮತ್ತು ಈ ಶಾಲೆಯನ್ನು ಕೋಟೆಯ ಪ್ರದೇಶಕ್ಕೆ ವರ್ಗಾಯಿಸಿದರು. ಪ್ಯಾಟ್ರಿಕ್ ದೋಯಲ್‌ರವರ ಅವಧಿಯ ನಂತರವೂ ಅವರು ಸ್ಥಾಪಿಸಿದ್ದ ಸಂತ ಜೋಸೆಫರ ಶಾಲೆಯು ಪ್ರಗತಿಯ ಹಾದಿಯಲ್ಲಿದ್ದಿತು. ೧೯೦೪ ರಲ್ಲಿ ಭಾರತೀಯ ಮಕ್ಕಳಿಗೂ ಮತ್ತು ಆಂಗ್ಲೋ ಇಂಡಿಯನ್ನರ ಮಕ್ಕಳಿಗೂ ಪ್ರತ್ಯೇಕ ಶಾಲೆ ಇರಬೇಕೆಂಬ ನಿಯಮ ರೂಪಿಸಲಾಯಿತು. ಇದರಿಂದಾಗಿ ಸಂತ ಜೋಸೆಫ್‌ರ ಶಾಲೆಯು ಇಬ್ಭಾಗವಾಯಿತು. ಈ ಮೊದಲಿನ ಕೋಟೆಯ ಶಾಲಾ ಕಟ್ಟಡದಲ್ಲಿ ಆಂಗ್ಲೋ ಇಂಡಿಯನ್ ಮಕ್ಕಳಿಗಾಗಿ ಸಂತ ಪಂಕ್ರಾಸ್ ಎಂಬ ಶಾಲೆಯನ್ನು ರಚಿಸಿ, ಇದಕ್ಕೆ ಪ್ರೌಢಶಾಲೆಯನ್ನಾಗಿ ಬಡ್ತಿ ನೀಡಲಾಯಿತು. ಮೊದಲನೇ ಮಹಾಯುದ್ಧದ ನಂತರ ಬಳ್ಳಾರಿಯಲ್ಲಿ ಬ್ರಿಟಿಷರ ಸಂಖ್ಯೆ ಕ್ಷೀಣಿಸುತ್ತಿದ್ದಂತೆಯೇ, ಇವರ ಮಕ್ಕಳಿಗಾಗಿ ನಡೆಸಲಾಗುತ್ತಿದ್ದ ಕೋಟೆಯ ಈ ಶಾಲಾ ಕಟ್ಟಡಕ್ಕೆ ಕೌಲ್‌ಬಜಾರಿನಲ್ಲಿದ್ದ ಸಂತ ಜಾನ್‌ರ ಶಾಲೆಯು ವರ್ಗವಾಗಿ ಬಂದಿತು. ಇಷ್ಟೆಲ್ಲಾ ಇತಿಹಾಸ ಹೊಂದಿರುವ ಸಂತ ಜಾನ್‌ರ ಶಾಲೆಯ ಆವರಣದಲ್ಲಿ ಇಂದೂ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು ಮತ್ತು ಪದವಿ ಪೂರ್ವ ಕಾಲೇಜನ್ನು (೧೯೮೭) ಹಾಗೂ ಪವಿತ್ರ ಹೃದಯ ಕಿಂಡರ್‌ಗಾರ್ಟನ್ ಅನ್ನು ಡಯೋಸಿಸ್ ಪಾದ್ರಿಗಳು ನಿರ್ವಹಿಸುತ್ತಿದ್ದಾರೆ. ಈ ಶಾಲಾ ಮತ್ತು ವಸತಿಕೇಂದ್ರಗಳ ಸದ್ಯದ ಮಾಹಿತಿಯನ್ನೊಳಗೊಂಡ ಪಟ್ಟಿಯು ಈ ಕೆಳಗಿನಂತಿದೆ.

| ಕ್ರ.ಸಂ. | ಹೆಸರು, ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧ | ಸಂತ ಜಾನ್‌ರ ಸಂಯುಕ್ತ ಪ.ಪೂ.ಕಾಲೇಜ್ ಕೋಟೆ, ಬಳ್ಳಾರಿ | ಫಾ. ವಿಜಯ್‌ಕುಮಾರ್ ಪಿ. | ೨೪ | ೩೫೮ |
| ೨ | ಸಂತ ಜಾನ್‌ರ ಪ್ರೌಢಶಾಲೆ ಕೋಟೆ, ಬಳ್ಳಾರಿ ಕನ್ನಡ, ಇಂಗ್ಲಿಷ್ ಮಾಧ್ಯಮ | ಫಾ. ವಿಜಯ್‌ಕುಮಾರ್ ಪಿ | ೨೬ | ೯೦೬ |
| ೩ | ಸಂತ ಜಾನ್‌ರ ಹಿರಿಯ ಪ್ರಾಥಮಿಕ ಶಾಲೆ ಕೋಟೆ, ಬಳ್ಳಾರಿ | ಫಾ. ವಿಜಯ್‌ಕುಮಾರ್ ಪಿ | ೧೨ | ೪೦೦ |
| ೪ | ಪವಿತ್ರ ಹೃದಯ ಕಿಂಡರ್ ಗಾರ್ಟನ್, ಕೋಟೆ ಬಳ್ಳಾರಿ | ಫಾ. ವಿಜಯ್‌ಕುಮಾರ್ ಪಿ. | ೦೪ | ೧೦೫ |
| ೫ | ಸಂತ ಜಾನ್‌ರ ಬಾಲಕರ ವಸತಿನಿಲಯ ಕೋಟೆ, ಬಳ್ಳಾರಿ | ಫಾ. ವಿಜಯ್‌ಕುಮಾರ್ ಪಿ. | ೦೪ | ೯೦ |

೧೮೭೫ ರಲ್ಲಿ ಫಾ ದೋಯಲ್‌ರವರ ಆಹ್ವಾನದ ಮೇರೆಗೆ ಅನಾಥಾಲಯದ ನಿರ್ವಹಣೆಗಾಗಿ ಗುಡ್ ಶೆಫರ್ಡ್ ಕನ್ಯಾಸಹೋದರಿಯರು ಬಳ್ಳಾರಿಗೆ ಆಗಮಿಸಿದರು. ಮತ್ತು ಕಂಟೋನ್‌ಮೆಂಟ್ ಪ್ರದೇಶದ ಚರ್ಚಿನ ಬಳಿ ಕಾನ್ವೆಂಟನ್ನು ಸ್ಥಾಪಿಸಿದರು. ಇದು ಈ ಸಭೆಯವರ ಕರ್ನಾಟಕದ ಎರಡನೇ ಕೇಂದ್ರವಾಯಿತು (ಮೊದಲನೆಯದು ಬೆಂಗಳೂರು ೧೮೫೪). ಈ ಸಭೆಯ ಕನ್ಯಾಸಹೋದರಿಯರು ೧೮೮೫ ರಲ್ಲಿ ಆರಂಭಿಸಿದ ಸಂತ ಫಿಲೋಮಿನಾ ಶಾಲೆಯು ಇಂದಿಗೂ ಇದೇ ಹೆಸರಿನ ಪ್ರೌಢಶಾಲೆಯಾಗಿ ಹೆಸರುವಾಸಿಯಾಗಿದೆ. ಅಲ್ಲದೆ ಕಂಟೋನ್‌ಮೆಂಟ್‌ನ ಇದೇ ಆವರಣದಲ್ಲಿರುವ ಪ್ರಾಥಮಿಕ ಮತ್ತು ನರ್ಸರಿ ಶಾಲೆಗಳೂ ವಿದ್ಯೆ ನೀಡುವಲ್ಲಿ ತೊಡಗಿವೆ. ೧೯೦೪ ರಿಂದ ೧೯೩೫ ರ ವರೆಗೆ ಮಧ್ಯ ಅವಧಿಯಲ್ಲಿ ಸಂತ ಪಂಕ್ರಾಸ್ ಶಾಲೆಯನ್ನು ಗುಡ್‌ಶೆಫರ್ಡ್ ಕನ್ಯಾಸಹೋದರಿಯರು ನಿರ್ವಹಿಸಿದ್ದರು. ಬಳ್ಳಾರಿಯಲ್ಲಿ ಈ ಸಭೆಯವರು ನಡೆಸುತ್ತಿರುವ ಶಿಕ್ಷಣ ಕೇಂದ್ರಗಳು ಇಂತಿವೆ.

| ಕ್ರ.ಸಂ. | ಹೆಸರು, ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧. | ಸಂತ ಫಿಲೋಮಿನಾ ಪ್ರೌಢಶಾಲೆ ಕಂಟೋನ್ ಮೆಂಟ್, ಬಳ್ಳಾರಿ ಇಂಗ್ಲಿಷ್ ಮಾಧ್ಯಮ | ಸಿಸ್ಟರ್ ಮರ್ಸಿ ಜಾರ್ಜ್ | ೪೦ | ೧೪೦೦ |
| ೨. | ಸಂತ ಮೇರಿ ಹಿ.ಪ್ರಾ.ಶಾಲೆ ಕಂಟೋನ್‌ಮೆಂಟ್ | ಸಿಸ್ಟರ್ ಜೋನ್ ಮೇರಿ | ೧೨ | ೪೩೫ |
| ೩. | ಲೋರ್ ಟು ಕಿ.ಗಾರ್ಟನ್ ಶಾಲೆ ಕಂಟೋನ್‌ಮೆಂಟ್ ಬಳ್ಳಾರಿ | ಸಿಸ್ಟರ್ ಮೇರಿ ಲೋರೋ | ೧೦ | ೩೨೦ |
| ೪. | ಸಂತ ಮೇರಿ ಬಾಲಕಿಯರ ವಿದ್ಯಾನಿಲಯ | ಸಿಸ್ಟರ್ ರೊಸಿರಿ ಜಿ. ಎಸ್. | ೦೩ | ೫೭ |

೧೮೯೩ ರ ಫೆಬ್ರವರಿಯಲ್ಲಿ ಬಳ್ಳಾರಿಯ ಕೌಲ್‌ಬಜಾರಿನಲ್ಲಿ ಸ್ಥಾಪನೆಯಾದ ಚರಿತ್ರೆಯನ್ನು ಹೊಂದಿರುವ ಸಿಸ್ಟರ್ಸ್ ಆಫ್ ಅವರ್ ಲೇಡಿ ಆಫ್ ಫಾತಿಮಾ ಎಂಬ ಸಂಭೆಯು ಪೂನಾದಲ್ಲಿ ಮುಖ್ಯ ಕೇಂದ್ರವನ್ನು ಹೊಂದಿದೆ. ಮೂಲ ಸ್ಥಳವಾದ ಕೌಲ್‌ಬಜಾರಿನಲ್ಲಿ ಮತ್ತು ಟಿ.ಬಿ.ಡ್ಯಾಂನಲ್ಲಿ ಶಿಕ್ಷಣ ಕೇಂದ್ರಗಳ ಮೂಲಕ ಸೇವೆ ನೀಡುತ್ತಿದೆ. ಅವು ಈ ಕೆಳಗಿನಂತಿವೆ.

| ಕ್ರ.ಸಂ. | ಹೆಸರು, ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧. | ಸಂತ ಜೋಸೆಫ್‌ರ ಬಾಲಕಿಯರ ಪ್ರೌಢಶಾಲೆ ಕೌಲ್‌ಬಜಾರ್ ಕನ್ನಡ - ಇಂಗ್ಲಿಷ್ ಮಾಧ್ಯಮ | ಸಿಸ್ಟರ್ ಮೇರಿ ಸೆಲಿನಾ | ೧೮ | ೮೯೫ |
| ೨. | ಸಂತ ಜೋಸೆಫ್‌ರ ಬಾಲಕಿಯರ ಹಿ.ಪ್ರಾ.ಶಾಲೆ ಕೌಲ್ ಬಜಾರ್, ಕನ್ನಡ ಮಾಧ್ಯಮ | ಸಿಸ್ಟರ್ ರೆಜಿನಾ ಮೈಕೆಲ್ | ೧೮ | ೯೫೦ |
| ೩. | ಸಂತ ಜೋಸೆಫ್‌ರ ಬಾಲಕಿಯರ ಹಿ.ಪ್ರಾ.ಶಾಲೆ ಕೌಲ್‌ಬಜಾರ್ ಇಂಗ್ಲಿಷ್ ಮಾಧ್ಯಮ ಬಳ್ಳಾರಿ | ಸಿಸ್ಟರ್ ಆ್ಯನ್ ಮ್ಯಾಥ್ಯೂ | ೩೫ | ೧೬೫೦ |
| ೪. | ಸಂತ ಜೋಸೆಫ್‌ರ ಬಾಲಕಿಯರ ಕಿಂಡರ್‌ಗಾರ್ಟನ್ ಕೌಲ್‌ಬಜಾರ್, ಬಳ್ಳಾರಿ | ಸಿಸ್ಟರ್ ಹೆಲೆನ್ ಎಸ್. | ೦೭ | ೩೬೦ |
| ೫. | ಸಂತ ಜೋಸೆಫ್‌ರ ಪ್ರೇಮಾಶ್ರಮ ಕೌಲ್‌ಬಜಾರ್ ಬಾಲಕಿಯರ ವಸತಿನಿಲಯ | ಸಿಸ್ಟರ್ ಸೆನೇರಿನಾ | ೦೩ | ೯೪ |
| ೬. | ಮಾತೆ ಮರಿಯಾ ಮಹಿಳಾ ಪ್ರಗತಿ ಧಾಮ | ಮಿಸ್ ಸುಗಂತ ಸಥಿಯರಾಜ್ | ೦೫ | ೧೦೦ |
| ೭. | ಸಂತ ಜೋಸೆಫ್‌ರ ಪ್ರೌಢಶಾಲೆ ಟಿ.ಎಸ್.ಪಿ. ಎದುರು ಇಂದಿರಾನಗರ ಟಿ.ಬಿ.ಡ್ಯಾಂ | ಸಿಸ್ಟರ್ ತೆರೆಸಾ ವರ್ಗೆಸೆ | ೨೨ | ೮೮೧ |
| ೮. | ಸಂತ ಜೋಸೆಫ್‌ರ ಹಿ.ಪ್ರಾ.ಶಾಲೆ ಟಿ.ಎಸ್.ಪಿ. ಎದುರು ಇಂದಿರಾನಗರ ಟಿ.ಬಿ.ಡ್ಯಾಂ | ಸಿಸ್ಟರ್ ತೆರೆಸಾ ವರ್ಗೆಸೆ | ೧೦ | ೬೫೮ |
| ೯. | ಸಂತ ಜೋಸೆಫ್‌ರ ನರ್ಸರಿ ಶಾಲೆ ಟಿ.ಎಸ್.ಪಿ. ಎದುರು | ಸಿಸ್ಟರ್ ತೆರೆಸಾ ವರ್ಗೆಸೆ | ೧೦ | ೬೫೮ |

ಹೈದ್ರಾಬಾದ್‌ನ ಇಂಗ್ಲಿಷ್ ಶಾಲೆಗಳ ನಿರ್ವಹಣೆಗೆ ೧೯೨೫ ರಲ್ಲಿ ಆಗಮಿಸಿದ ಆರ್ಡರ್ ಆಫ್ ಫ್ರೆಯರ್ ಮೈನರ್ ಸಭೆಯ ಪಾದ್ರಿಗಳು ೧೯೨೮ ರಲ್ಲಿ ರಚಿಸಲಾದ ಬಳ್ಳಾರಿ ಮಿಷನ್‌ನ ನೇತೃತ್ವವನ್ನು ಹೊತ್ತರು. ರೆ. ಫಾ. ಎರ್ನೆಸ್ಟ್ ರೈಲಿ ಮತ್ತು ರೆ. ಫಾ. ಮ್ಯಾಥ್ಯೂ ವಾಲೆಶ್‌ರವರು ಈ ಮೊದಲು ಸ್ಥಾಪನೆಗೊಂಡಿದ್ದ ಶಾಲೆಗಳನ್ನು ಮುಂದುವರೆಸಿಕೊಂಡು ಬಂದರು. ೧೯೪೯ ರಲ್ಲಿ ಬಳ್ಳಾರಿಯನ್ನು ಪ್ರತ್ಯೇಕ ಧರ್ಮಕ್ಷೇತ್ರವಾಗಿ ರಚಿಸಲಾಯಿತು. ಈ ನಂತರ ಕ್ರಮವಾಗಿ ಧರ್ಮಾಧ್ಯಕ್ಷರುಗಳಾಗಿ ಬಂದ ರೆ. ಫಾ. ಜೆ. ಎಫ್. ಹೋಗನ್, ರೆ. ಫಾ. ಅಂಬ್ರೋಜ್ ಎಡನಪಳ್ಳಿ, ರೆ. ಜೋಸೆಫ್ ಡಿ. ಸಿಲ್ವಾ ರವರುಗಳು ಈ ಮೊದಲಿದ್ದ ಶಾಲೆಗಳನ್ನು ಉಳಿಸಿಕೊಂಡು ಬಂದರು.

ಅಲ್ಲದೆ ಇಂದಿಗೂ ಡಯಾಸಿಸ್ ಪಾದ್ರಿಗಳ ಮೂಲಕ ಮುನ್ನಡೆಸಿಕೊಂಡು ಬರಲಾಗುತ್ತಿದೆ. ಇವುಗಳಲ್ಲಿ ಒಂದಾದ ಸಂತ ಜೋಸೆಫ್‌ರ ಶಾಲೆಯು ೧೯೦೬ ರಲ್ಲಿ ಸ್ಥಾಪನೆಯಾದಂತಹ ಹಿನ್ನೆಲೆಯನ್ನು ಹೊಂದಿದೆ. ಕಳೆದ ೨೦೦೬ ರಲ್ಲಿ ಈ ಶಾಲೆಯಲ್ಲಿ ಶತಮಾನೋತ್ಸವವನ್ನು ಆಚರಿಸಲಾಯಿತು. ಇಂದು ಡಯಾಸಿಸ್ ಪಾದ್ರಿಗಳ ನೇತೃತ್ವದಲ್ಲಿ ನಡೆಸಲ್ಪಡುತ್ತಿರುವ ಶಾಲೆಗಳು ಈ ಕೆಳಗಿನಂತಿವೆ.

| ಕ್ರ.ಸಂ. | ಹೆಸರು ,ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧. | ಸಂತ ಜೋಸೆಫ್‌ರ ಬಾಲಕರ ಪ್ರೌಢಶಾಲೆ ಕನ್ನಡ,ಇಂಗ್ಲಿಷ್ ಮಾಧ್ಯಮ, ಕೌಲ್‌ಬಜಾರ್ ಬಳ್ಳಾರಿ | ಫಾ. ಆರೋಕ್ಯನಾಥನ್ .ಎಲ್ | ೦೯ | ೨೪೩ |
| ೨. | ಸಂತ ಜೋಸೆಫ್‌ರ ಬಾಲಕರ ಹಿ.ಪ್ರಾ.ಶಾಲೆ ಕನ್ನಡ ಮಾಧ್ಯಮ ಕೌಲ್‌ಬಜಾರ್, ಬಳ್ಳಾರಿ | ಫಾ. ಆರೋಕ್ಯನಾಥನ್ .ಎಲ್ | ೦೯ | ೭೫೮ |
| ೩. | ಸಂತ ಜೋಸೆಫ್‌ರ ಬಾಲಕರ ನರ್ಸರಿ ಶಾಲೆ ಇಂಗ್ಲಿಷ್ ಮಾಧ್ಯಮ ಕೌಲ್‌ಬಜಾರ್ | ಫಾ. ಆರೋಕ್ಯನಾಥನ್ .ಎಲ್ | ೧೬ | ೫೨೫ |
| ೪. | ಸಂತ ಜೋಸೆಫ್‌ರ ಬಾಲಕರ ನರ್ಸರಿ ಶಾಲೆ ಕೌಲ್‌ಬಜಾರ್ | ಫಾ. ಆರೋಕ್ಯನಾಥನ್ .ಎಲ್ | ೦೩ | ೧೭೪ |
| ೫. | ವಿಯೆನ್ನಾ ವಿದ್ಯಾಲಯ ಪ್ರೌಢ ಶಾಲೆ ಕಂಟೋನ್‌ಮೆಂಟ್ | ಫಾ. ವಿನ್ಸೆಂಟ್ ಎಂ.ಡಿ. | ೨೨ | ೬೩೮ |
| ೬. | ವಿಯೆನ್ನಾ ವಿದ್ಯಾಲಯ ಪ್ರಾಥಮಿಕ ಶಾಲೆ ಕಂಟೋನ್‌ಮೆಂಟ್ | ಫಾ. ವಿನ್ಸೆಂಟ್ ಎಂ. ಡಿ. | ೧೨ | ೪೩೫ |
| ೭. | ವಿಯೆನ್ನಾ ವಿದ್ಯಾಲಯ ನರ್ಸರಿ ಶಾಲೆ ಕಂಟೋನ್‌ಮೆಂಟ್ | ಫಾ. ವಿನ್ಸೆಂಟ್ ಎಂ. ಡಿ. | ೬ | ೮೬ |
| ೮. | ಸಂತ ಮಾರ್ಟಿನ್‌ರ ಬಾಲಕರ ವಸತಿ ನಿಲಯ ಕೌಲ್‌ಬಜಾರ್ ಬಳ್ಳಾರಿ | ಫಾ. ಜಯರಾಜ್ | ೪ | ೯೨ |
| ೯. | ಕ್ರಿಸ್ತ ಶರಣ ವಿದ್ಯಾಪೀಠ ಶಾಲೆ ಕ್ರಿಸ್ತಶರಣ ವಿದ್ಯಾಮಂದಿರ ಹಗರಿಬೊಮ್ಮನಹಳ್ಳಿ | ಫಾ. ದಾನಪ್ಪ. ಎಂ | ೧೪ | ೧೪೩ |
| ೧೦. | ಸಂತ ಮೈಕಲ್‌ರ ಶಾಲೆ ಕೂಡ್ಲಿಗಿ | ಫಾ. ಸ್ಯಾಮ್‌ನಲನ್ | ೧೨ | ೩೧೧ |
| ೧೧. | ಲಿಟಲ್ ಫ್ಲವರ್ ವಸತಿನಿಲಯ ಸಿರುಗುಪ್ಪ | ಫಾ. ರಾಜಪ್ಪನ್ | ೦೩ | ೨೮ |

೧೯೮೦ ರಲ್ಲಿ ಬಳ್ಳಾರಿಯ ಸಂಡೂರಿಗೆ ಆಗಮಿಸಿದ ಸಾಲೇಶಿಯನ್ ಮಿಷನರಿ ಆಫ್ ಮೇರಿ ಇಮ್ಯಾಕುಲೇಟ್ ಸಭೆಯ ಕನ್ಯಾಸಹೋದರಿಯರು ಅಂದಿನಿಂದ ಸಂಡೂರು ನಗರದಲ್ಲಿ ನಡೆಸಿಕೊಂಡು ಬರುತ್ತಿರುವ ಶಿಕ್ಷಣಕೇಂದ್ರಗಳು ಇಂತಿವೆ.

| ಕ್ರ.ಸಂ. | ಹೆಸರು ,ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧. | ಕೃಪಾನಿಲಯ ಪ್ರೌಢಶಾಲೆ ಸಂಡೂರು | ಸಿಸ್ಟರ್ ಮೇರಿ ಫಾತಿಮಾ | ೨೦ | ೧೭೫ |
| ೨. | ಕೃಪಾನಿಲಯ ಪ್ರಾಥಮಿಕ ಶಾಲೆ ಸಂಡೂರು | ಸಿಸ್ಟರ್ ಮೇರಿ ಫಾತಿಮಾ | ೨೦ | ೪೯೫ |
| ೩. | ಕೃಪಾ ನಿಲಯ ನರ್ಸರಿ ಶಾಲೆ ಸಂಡೂರು | ಸಿಸ್ಟರ್‌ಮೇರಿ ಫಾತಿಮಾ | ೦೫ | ೧೧೩ |

ಬೆಥನಿಯ ಲಿಟಲ್ ಫ್ಲವರ್ ಕನ್ಯಾಸಹೋದರಿಯರು ಹೊಸಪೇಟೆಯಲ್ಲಿ ೧೯೮೭ ರಲ್ಲಿ ಕಾರ್ಯಾರಂಭಿಸಿ ಸ್ಥಳೀಯರಿಗೆ ಶೈಕ್ಷಣಿಕ ಸೇವೆಯನ್ನು ನೀಡುತ್ತಿದ್ದಾರೆ. ಇವರ ಹೊಸಪೇಟೆ ಕೇಂದ್ರಿತ ಶಾಲೆಗಳು ಮತ್ತು ವಸತಿನಿಲಯಗಳು ಈ ಮುಂದಿನಂತಿವೆ.

| ಕ್ರ.ಸಂ. | ಹೆಸರು ,ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧. | ಲಿಟಲ್ ಫ್ಲವರ್ ಪ್ರೌಢಶಾಲೆ. ಹೊಸಪೇಟೆ | ಸಿಸ್ಟರ್ ಲಿಲ್ಲಿಥಾಮಸ್ | ೧೨ | ೨೨೫ |
| ೨. | ಲಿಟಲ್ ಫ್ಲವರ್ ಹಿ.ಪ್ರಾ.ಶಾಲೆ ಹೊಸಪೇಟೆ ಇಂಗ್ಲಿಷ್ ಮಾಧ್ಯಮ | ಸಿಸ್ಟರ್ಸ್ ಅಲ್ಫೋನ್ಸಾ ಎಫ್. ಎಸ್. | ೧೨ | ೧೧೮೨ |
| ೩. | ಲಿಟಲ್ ಫ್ಲವರ್ ಹಿ.ಪ್ರಾ.ಶಾಲೆ. ಹೊಸಪೇಟೆ ಕನ್ನಡ ಮಾಧ್ಯಮ | ಸಿಸ್ಟರ್ ತಂಗಮ್ಮ | ೧೮ | ೧೦೫೮ |
| ೪. | ಲಿಟಲ್ ಫ್ಲವರ್ ನರ್ಸರಿ ಶಾಲೆ ಹೊಸಪೇಟೆ | ಸಿಸ್ಟರ್ ವಿಜಿ ಎಫ್.ಎಸ್. | ೦೫ | ೩೨೪ |
| ೫. | ಲಿಟಲ್ ಫ್ಲವರ್ ಬಾಲಕರ ವಸತಿನಿಲಯ ಹೊಸಪೇಟೆ | ಸಿಸ್ಟರ್ ಎಲಿಝಬೆತ್ | ೦೫ | ೪೦ |

ಸಿಸ್ಟರ್ಸ್ ಆಫ್ ಚಾರಿಟಿ ಸಭೆಯ ಕನ್ಯಾಸಹೋದರಿಯರು ೧೯೯೦ ರಿಂದ ಬಳ್ಳಾರಿಯ ಕಂಪ್ಲಿ ಪ್ರದೇಶದಲ್ಲಿ ಒಂದು ನರ್ಸರಿ ಶಾಲೆಯ ಮೂಲಕ ಶಿಕ್ಷಣ ಸೇವೆಯಲ್ಲಿ ತೊಡಗಿದ್ದಾರೆ. ಅದೊಂದು ಶಾಲೆಯ ವಿವರಣೆ ಇಂತಿದೆ.

| ಕ್ರ.ಸಂ. | ಹೆಸರು ,ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧. | ಸಹಾಯ ಮಾತೆ ನರ್ಸರಿ ಶಾಲೆ, ಕಂಪ್ಲಿ | ಸಿಸ್ಟರ್ ಜುಲೈನಾ ಮಚಡೊ | ೦೨ | ೧೬೦ |
| ೨. | ಕ್ವೀನ್ ಮೇರಿ ಪ್ರಾ. ಶಾಲೆ | ಫಾ. ಅಂತಯ್ಯ | ೦೬ | ೩೦೦ |

೧೯೯೫ ಮೇ ೨೨ ರಂದು ಬಳ್ಳಾರಿಗೆ ಆಗಮಿಸಿದ ಸೊಸೈಟಿ ಆಫ್ ಜೀಸಸ್ ಮೇರಿ ಅಂಡ್ ಜೋಸೆಫ್ ಸಭೆಯವರು ಅಂದಿನಿಂದ ಸಿರುಗುಪ್ಪ ನಗರದಲ್ಲಿ ವಿಜಯಮೇರಿ ಕಾನ್ವೆಂಟ್‌ನ ಆವರಣದಲ್ಲಿ ಮೂರು ಹಂತದ

ಶಿಕ್ಷಣವನ್ನು ಒಂದೇ ಛಾವಣೆಯಡಿ ನೀಡುತ್ತಿದ್ದಾರೆ. ಈ ಶಾಲೆಗಳ ಮಾಹಿತಿ ಪಟ್ಟಿ ಕೆಳಗಿನಂತಿದೆ.

| ಕ್ರ.ಸಂ. | ಹೆಸರು ,ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧. | ವಿಜಯಮೇರಿ ಪ್ರೌಢಶಾಲೆ ಸಿರುಗುಪ್ಪ | ಸಿಸ್ಟರ್ ಸಿಸಿಲಿ ಮಲಿಕ್ಕಲ್ | ೧೬ | ೪೬೧೮ |
| ೨. | ವಿಜಯಮೇರಿ ಪ್ರಾಥಮಿಕ ಶಾಲೆ ಸಿರುಗುಪ್ಪ | ಸಿಸ್ಟರ್ ಫಿಲೋಮಿನಾ ಜೋಸೆಫ್ | ೨೬ | ೨೨೮ |
| ೩. | ವಿಜಯ ಮೇರಿ ನರ್ಸರಿ ಶಾಲೆ ಸಿರುಗುಪ್ಪ | ಸಿಸ್ಟರ್‌ಫಿಲೋಮಿನಾ ಜೋಸೆಫ್ | ೦೪ | ೨೨೮ |
| ೪. | ವಿಜಯ ಮೇರಿ ವಸತಿ ನಿಲಯ | ಸಿಸ್ಟರ್ ಫಿಲೋಮಿನಾ ಜೋಸೆಫ್ | ೦೧ | ೬೦ |

ಸಿಸ್ಟರ್ಸ್ ಆಫ್ ದಿ ಕ್ರಾಸ್ ಆಫ್ ಚವನೋಡ್ ಸಭೆಯ ಕನ್ಯಾಸಹೋದರಿಯರು ಬಳ್ಳಾರಿ ಸಿರುಗುಪ್ಪ ಮಾರ್ಗದಲ್ಲಿ ಬರುವ ಲಕ್ಷ್ಮಿನಗರ ಕ್ಯಾಂಪಿನಲ್ಲಿ ಕಳೆದ ಒಂದು ದಶಕದಿಂದ ಈ ಕೆಳಗಿನ ನರ್ಸರಿ ಮತ್ತು ಪ್ರಾಥಮಿಕ ಶಿಕ್ಷಣ ಕೇಂದ್ರಗಳನ್ನು ನಿರ್ವಹಿಸುತ್ತಿದ್ದಾರೆ.

| ಕ್ರ.ಸಂ. | ಹೆಸರು ,ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧. | ಹೋಲಿ ಕ್ರಾಸ್ ಪ್ರಾಥಮಿಕ ಶಾಲೆ ಲಕ್ಷ್ಮಿನಗರ ಬಳ್ಳಾರಿ | ಸಿಸ್ಟರ್ ಮೇರಿ ಜೋ | ೧೫ | ೪೬೦ |
| ೨. | ಹೋಲಿಕ್ರಾಸ್ ನರ್ಸರಿ ಶಾಲೆ ಲಕ್ಷ್ಮಿನಗರ ಬಳ್ಳಾರಿ | ಸಿಸ್ಟರ್ ಮೇರಿ ಜೋ | ೩ | ೭೦ |

ಕಳೆದ ೨೦೦೫ ರಲ್ಲಿ ಆರಂಭಿಸಲಾದ ಕುರುಗೋಡಿನ ಸೇಕ್ರೆಡ್ ಹಾರ್ಟ್ ಕಿಂಡರ್‌ಗಾರ್ಟನ್ ಶಾಲೆಯನ್ನು ಮಿಷನರಿ ಸಿಸ್ಟರ್ಸ್ ಆಫ್ ಸೆಕ್ರೆಡ್ ಹಾರ್ಟ್ ಆಫ್ ಜೀಸಸ್ ಸಭೆಯ ಕನ್ಯಾಸಹೋದರಿಯರು ನಡೆಸಿಕೊಂಡು ಬರುತ್ತಿದ್ದಾರೆ. ಇತ್ತೀಚಿಗೆ ಆರಂಭವಾದ ಈ ಶಾಲೆಯು ಇನ್ನೂ ಸ್ಥಳೀಯರ ಪ್ರೋತ್ಸಾಹದ ನಿರೀಕ್ಷೆಯಲ್ಲಿದೆ. ಈ ಶಾಲೆಯ ಮಾಹಿತಿ ಈ ಕೆಳಗಿನ ರೀತಿಯಲ್ಲಿದೆ.

| ಕ್ರ.ಸಂ. | ಹೆಸರು ,ವಿಳಾಸ | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| ೧. | ಸೇಕ್ರೆಡ್ ಹಾರ್ಟ್ ಕಿಂಡರ್ ಗಾರ್ಟನ್ ಶಾಲೆ ಕುರುಗೋಡು | ಸಿಸ್ಟರ್ ಸಗಾಯ ಮೇರಿ | ೦೨ | ೧೬ |

ಒಟ್ಟಾರೆ ಕ್ಯಾಥೋಲಿಕ್‌ರ ಮಿಷನರಿಗಳ ಒಂದು ಪದವಿ ಪೂರ್ವ ಕಾಲೇಜ್, ಹತ್ತು ಪ್ರೌಢಶಾಲೆಗಳು, ಹದಿನಾರು ಪ್ರಾಥಮಿಕ ಶಾಲೆಗಳು, ಮತ್ತು ಹದಿಮೂರು ನರ್ಸರಿ ಶಾಲೆಗಳು ಬಳ್ಳಾರಿ ವ್ಯಾಪ್ತಿಯಲ್ಲಿ ವಿದ್ಯೆಯನ್ನು ನೀಡುತ್ತಿವೆ. ಈಗಲೂ ಕ್ರೈಸ್ತ ಧರ್ಮ ಪ್ರಸಾರದ ಸಣ್ಣದೊಂದು ಪ್ರಯತ್ನ ಈ ಶಾಲೆಗಳಲ್ಲಿ ನಡೆದೇ ಇದೆ. ಕ್ರೈಸ್ತರ ಹಬ್ಬಗಳಂದು ಶಾಲೆಗಳಲ್ಲಿ ಏರ್ಪಡಿಸುವ ಕಾರ್ಯಕ್ರಮಗಳಲ್ಲಿ, ಪ್ರತಿದಿನದ ಶಾಲಾ ಆರಂಭಕ್ಕೆ ಪೂರ್ವದಲ್ಲಿ ನಡೆಸುವ ಪ್ರಾರ್ಥನಾ ವಿಧಿಗಳಲ್ಲಿ ಮತ್ತು ಪೌಢಶಾಲೆ ಮಕ್ಕಳಿಗೆ 'ನೀತಿಮಾರ್ಗ'ವೆಂಬ ವಿಶೇಷ ಪಠ್ಯವನ್ನು

ಪಾದ್ರಿಗಳು ಬೋಧಿಸುವಲ್ಲಿ ಕ್ರೈಸ್ತ ಧರ್ಮದ ಪ್ರಭಾವ ಈ ಶಾಲೆಯ ಮಕ್ಕಳ ಮೇಲಾಗುವುದನ್ನು ಕಾಣಬಹುದು. ಮಿಷನರಿಗಳು ಮಾತ್ರವಲ್ಲದೆ ಈ ಶಾಲೆಗಳಲ್ಲಿ ದುಡಿಯುತ್ತಿರುವ ಬೋಧಕ-ಬೋಧಕೇತರ ಸಿಬ್ಬಂದಿಗಳಲ್ಲಿ ಶೇ ೫೦ ರಷ್ಟು ಸಿಬ್ಬಂದಿಗಳು ಕ್ರೈಸ್ತರೇ ಆಗಿರುತ್ತಾರೆ. ಅದೊಂದು ರೂಢಿಯಾಗಿ ಆಚರಣೆಯಲ್ಲಿದೆ. ಕ್ರೈಸ್ತ ಮಿಷನರಿಗಳ ಶಾಲೆಗಳಲ್ಲಿ ಸುಮಾರು ೧೮೦೦೦ ವಿದ್ಯಾರ್ಥಿಗಳು (ಒಟ್ಟು ಕಾಲೇಜ್ ವಿದ್ಯಾರ್ಥಿಗಳು ೬೦೦, ಪ್ರೌಢಶಾಲೆ ವಿದ್ಯಾರ್ಥಿಗಳು ೬೭೦೦, ಪ್ರಾಥಮಿಕ ಶಾಲೆ ವಿದ್ಯಾರ್ಥಿಗಳು ೮೫೦೦, ನರ್ಸರಿ ಶಾಲೆ ವಿದ್ಯಾರ್ಥಿಗಳು ೨೦೦೦) ವಿದ್ಯೆ ಪಡೆಯುತ್ತಿದ್ದಾರೆ. ಇದರಲ್ಲಿ ಸುಮಾರು ೨೭೦೦ ವಿದ್ಯಾರ್ಥಿಗಳು ಕ್ಯಾಥೋಲಿಕ್ ಪಂಥಕ್ಕೆ ಸೇರಿದ ಕ್ರೈಸ್ತರಿದ್ದಾರೆ. ಬಹುತೇಕ ಈ ಮಿಷನರಿ ಶಾಲೆಗಳು ಉತ್ತಮ ಕಟ್ಟಡಗಳನ್ನು, ಪರಿಣಿತ ಶಿಕ್ಷಕ ವೃಂದವನ್ನು ಮತ್ತು ಆಧುನಿಕ ಸೌಕರ್ಯಗಳಿಂದ ಕೂಡಿವೆ. ಶಿಸ್ತಿನ ಶಿಕ್ಷಣಕ್ಕೆ ಇವರ ಶಾಲೆಗಳು ಒತ್ತು ನೀಡುತ್ತವೆ. ಈ ಅಂಶವು ಕ್ರೈಸ್ತ ಮಿಷನರಿ ಶಾಲೆಗಳಿಗೆ ಬಹುಬೇಡಿಕೆಯನ್ನು ತಂದಿದೆ. ಬಳ್ಳಾರಿ ಜಿಲ್ಲೆಯ ಮಕ್ಕಳ ಆರಂಭಿಕ ಶಿಕ್ಷಣ ರೂಪಿಸುವಲ್ಲಿ ಈ ಎಲ್ಲಾ ಶಾಲೆಗಳು ಮಹತ್ವದ ಪಾತ್ರವಹಿಸಿವೆ ಮತ್ತು ವಹಿಸುತ್ತಿವೆ.

### ೪.೨ ಮುದ್ರಣ

ಕ್ರಿ.ಶ. ೧೪೫೬ ರ ಸುಮಾರಿನಲ್ಲಿ ಯುರೋಪಿನಲ್ಲಿ ಮುದ್ರಣ ಕಲೆಯು ಆವಿಷ್ಕಾರಗೊಂಡಿತು. ಈ ಕಲೆಯನ್ನು ಜರ್ಮನಿಯ ಮೆನ್ಜ್‌ನ ಗುಟನ್‌ಬರ್ಗ್ ಎಂಬುವನು ಅಚ್ಚುಮೊಳೆಗಳನ್ನು ಮೊದಲಬಾರಿಗೆ ತಯಾರಿಸುವ ಮೂಲಕ ಶೋಧಿಸಿದನು. ಈ ಕಾರ್ಯದಲ್ಲಿ ಈತನೊಂದಿಗೆ ಕೆಲಸ ಮಾಡಿದ್ದಂತಹ ಜೋಹನ್ ಫಸ್ಟ್ ಹಾಗೂ ಪೀಟರ್ ಶೋಷರ್ ಎಂಬುವವರು ಮತ್ತು ಇಂಗ್ಲೆಂಡಿನ ವಿಲಿಯಂ ಕಾಕ್ಸಟನ್‌ರವರುಗಳು ಮತ್ತಷ್ಟು ಸುಧಾರಿತ ಮುದ್ರಣ ಯಂತ್ರಗಳನ್ನು ಶೋಧಿಸಿದರು. ಯುರೋಪಿನಲ್ಲಿ ಪುನರುಜ್ಜೀವನ ರೂಪತಾಳಲು ಕಾರಣವಾದ ಹಲವು ಘಟನೆಗಳಲ್ಲಿ ಮುದ್ರಣ ಶೋಧವೂ ಒಂದಾಗಿದೆ. ಮುದ್ರಣದ ಬಳಕೆಯು ಭಾರತಕ್ಕೆ ಸಂದಿದ್ದು ಮಿಷನರಿಗಳ ಆಗಮನದಿಂದ ಎಂಬುದರಲ್ಲಿ ಎರಡು ಮಾತಿಲ್ಲ.

ಭಾರತದಲ್ಲಿ ಮುದ್ರಣವನ್ನು ಮೊದಲಿಗೆ ಬಳಸಿದ ಕೀರ್ತಿಯು ಜೆಸುಯಿಟ್ ಪಾದ್ರಿಗಳಿಗೆ ಸಲ್ಲುತ್ತದೆ. ಗೋವೆಗೆ ಬಂದು ನೆಲೆಸಿದ್ದ ಕ್ಯಾಥೊಲಿಕ್ ಪಂಥದ ಮಿಷನರಿಯಾದ ಸಂತ ಕ್ಸೇವಿಯರ್‌ನು ರಚಿಸಿದ 'ಡೌಟ್ರಿನಾ ಕ್ರಿಸ್ತಾ' ಎಂಬ ಗ್ರಂಥವು ಭಾರತದಲ್ಲಿ ಮುದ್ರಣಗೊಂಡ (೧೫೫೬) ಮೊದಲ ಕೃತಿಯಾಗಿದೆ.[೯] ಇದರಂತೆ ನಂತರದಲ್ಲಿಯೂ ಮಿಷನರಿಗಳು ಮುದ್ರಣವನ್ನು ಧರ್ಮ ಪ್ರಸಾರ ಮಾಡಲು ಬಳಸಿದರು. ಅಲ್ಲದೆ ಇದುವರೆಗೆ ನೀವು ಉಪದೇಶ ಮಾಡಿದ ವಿಷಯವನ್ನು ಎಲ್ಲಿಯಾದರೂ ಬರೆದದ್ದುಂಟೆ ಎಂದು ಮಿಷನರಿಗಳಿಂದ ನಮ್ಮನ್ನು ಜನ ಕೇಳುತ್ತಾರೆ ಎಂಬ ಮಿಷನರಿಗಳಲ್ಲಿನ ಅಳುಕಿನ ಭಾವನೆಯೂ ಕಾರಣವಾಗಿದ್ದಿತು.

ಮುದ್ರಣ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಲು ಭಾಷಾಂತರಕಾರರು, ವ್ಯಾಕರಣಕಾರರು, ಅಚ್ಚುಮೊಳೆ ಜೋಡಿಸುವವರು, ಹಾಳೆ ಹೊಂದಿಸುವವರು, ವಿತರಕರು, ಇನ್ನಿತರರನ್ನು ಒಳಗೊಂಡ 'ಸತ್ಯವೇದ ಸಂಘ'ಗಳನ್ನು ಸ್ಥಾಪಿಸಿದರು. ಈ ಸಂಘದ ಮೂಲಕ ಕ್ರೈಸ್ತ ಧರ್ಮದ ಬಗ್ಗೆ ತಿಳಿಸುವ ಕರಪತ್ರಗಳನ್ನು ಮುದ್ರಿಸಿ ಹಂಚಲಾಗುತ್ತಿತ್ತು. ಅಲ್ಲದೆ ಸ್ಥಳೀಯ ಭಾಷೆ ಅಧ್ಯಯನ ಕೈಗೊಂಡು ಆ ಭಾಷೆಗಳಿಗೆ ಬೈಬಲನ್ನು ಭಾಷಾಂತರಿಸುವ ಕಾರ್ಯಗಳನ್ನು ಹಮ್ಮಿಕೊಳ್ಳಲಾಗುತ್ತಿತ್ತು. ಇಂತಹ ಮೊದಲ ಸಂಘವು ಬಂಗಾಳದ ಸೆರಾಂಪುರದಲ್ಲಿ ವಿಲಿಯಂ ಕ್ಯಾರಿವರಿಂದ ಸ್ಥಾಪನೆಯಾಯಿತು. ವಿಲಿಯಂ ಕ್ಯಾರಿ ವಿರಚಿತ ಕನ್ನಡ ವ್ಯಾಕರಣ ಕುರಿತಾದ ಎ ಗ್ರಾಮರ್ ಆಫ್ ದಿ ಕರ್ನಾಟ ಲಾಂಗ್ವೇಜ್ ಎಂಬ ಕೃತಿಯು ಈ ಕೇಂದ್ರದಲ್ಲಿ ೧೮೧೭ ರಲ್ಲಿ ಮುದ್ರಣ ಕಂಡಿತು. ಇದುವೇ ಮುದ್ರಣಗೊಂಡ ಕನ್ನಡ ಮೂಲದ ಮೊದಲ ಕೃತಿಯಾಗಿದೆ.[೧೦] ಭಾರತದಲ್ಲಿ ಸತ್ಯವೇದ ಸಂಘವು ಸ್ಥಾಪನೆಯಾಗಿ ಈ ರೀತಿಯ ಕಾರ್ಯಗಳು ನಡೆದ ಎರಡನೇ ಕೇಂದ್ರವಾಗಿ ಬಳ್ಳಾರಿ ಕಂಡುಬರುತ್ತದೆ. ಬಳ್ಳಾರಿಯನ್ನು ಕೇಂದ್ರವಾಗಿಟ್ಟುಕೊಂಡು

ಲಂಡನ್ ಮಿಷನ್ನಿನ ಮಿಷನರಿಗಳು ಕೈಗೊಂಡ ಮುದ್ರಣ ಕಾರ್ಯಗಳು ಕನ್ನಡ ಮತ್ತು ಕರ್ನಾಟಕದ ಇತಿಹಾಸದಲ್ಲಿಯೇ ಪ್ರಥಮವುಗಳಾಗಿವೆ. ಈ ಮಿಷನ್ನಿನ ಮೊದಲ ಮಿಷನರಿಯಾದ ಜಾನ್ ಹ್ಯಾಂಡ್ಸರು ಬಳ್ಳಾರಿಯಲ್ಲಿ ಉಳಿದುಕೊಂಡು ರಚಿಸಿದ 'ಎ ಗ್ರಾಮರ್ ಆಫ್ ದಿ ಕರ್ನಾಟಕ ಲಾಂಗ್ವೇಜ್'(Carnataka) ಎಂಬ ಕೃತಿಯನ್ನು ೧೮೨೦ ರಲ್ಲಿ ಮದ್ರಾಸಿನ ಸೇಂಟ್ ಜಾರ್ಜ್ ಕಾಲೇಜ್ ಪ್ರೆಸ್ಸಿನಲ್ಲಿ ಮುದ್ರಣಕ್ಕೆ ಒಳಪಡಿಸಿದರು. ಬಳ್ಳಾರಿಗೆ ಮುದ್ರಣ ಯಂತ್ರವನ್ನು ತರಿಸುವ ಯತ್ನವಾಗಿ ಮದ್ರಾಸಿನಿಂದಲೆ ತಮ್ಮ ಲಂಡನ್ ಕೇಂದ್ರಕ್ಕೆ ಪತ್ರಗಳ ಮೂಲಕ ಮನವಿ ಸಲ್ಲಿಸಿದರು. ಅಲ್ಪ ಭರವಸೆ ಪಡೆದ ನಂತರ ಬಳ್ಳಾರಿಗೆ ಹಿಂದಿರುಗಿ ಸತ್ಯವೇದ ಸಂಘವನ್ನು ಸ್ಥಾಪಿಸಿದರು. ೧೮೨೬ ರಲ್ಲಿ ಮುದ್ರಣ ಯಂತ್ರವನ್ನು ಬಳ್ಳಾರಿಗೆ ತರಲಾಯಿತು ಹಾಗೂ ಅದನ್ನು ಮಿಷನ್ ತೋಟ (ಇಂದಿನ ವಾರ್ಡಲಾ ಕಾಲೇಜ್ ಆವರಣ)ದಲ್ಲಿ ನೆಲೆಗೊಳಿಸಿದರು.[೧೮] ಇದರಿಂದ ಬಳ್ಳಾರಿ ಮಿಷನರಿಗಳು ಮುದ್ರಣಕ್ಕಾಗಿ ದೂರದ ಮದ್ರಾಸಿಗೆ ಹೋಗುವುದು ತಪ್ಪದಂತಾಯಿತು. ಈ ಮಿಷನ್ ಮುದ್ರಣ ಕೇಂದ್ರದಲ್ಲಿ ಕರಪತ್ರಗಳನ್ನು ಶಬ್ದಕೋಶಗಳನ್ನು, ವ್ಯಾಕರಣ ಕೃತಿಗಳನ್ನು, ಭಾಷಾಂತರಗೊಳಿಸಿದ ಧಾರ್ಮಿಕ ಮತ್ತು ಸಾಹಿತ್ಯಕೃತಿಗಳನ್ನು ಹಾಗೂ ಶಾಲಾ ಪಠ್ಯಗಳನ್ನು ಮುದ್ರಣಗೊಳಿಸಲಾಯಿತು. ಈ ಎಲ್ಲಾ ಕಾರ್ಯಗಳು ಮದ್ರಾಸ್ ಸರ್ಕಾರದ ಮುದ್ರಣಾಲಯಗಳು ಸ್ಥಾಪನೆಯಾಗುವ ೧೮೩೧ ಪೂರ್ವದಲ್ಲಿ ಮಿಷನರಿಗಳಿಂದ ನಡೆಸಲ್ಪಟ್ಟಿದ್ದವು. ೧೮೫೫ ರಲ್ಲಿ ಬ್ರಿಟಿಷ್ ಸರ್ಕಾರವು ಡಿಸ್ಟ್ರಿಕ್ಟ್ ಮುದ್ರಣಾಲಯಗಳನ್ನು ತೆರೆಯುವ ಮೂಲಕ ಮುದ್ರಣದ ಬಳಕೆಯು ವ್ಯಾಪಕವಾಗತೊಡಗಿತು. ಇದಕ್ಕೆ ವ್ಯತಿರಿಕ್ತವಾಗಿ ಸ್ಥಿತಿ ಬಳ್ಳಾರಿಯಲ್ಲಿ ಉದ್ಭವಿಸಿತು. ಮುದ್ರಣ ಕಾರ್ಯವು ಉತ್ತಮ ನಿರ್ವಹಣಾಕಾರರ ಕೊರತೆಯಿಂದಾಗಿ ೧೮೩೭ ರಲ್ಲಿ ಬಳ್ಳಾರಿಗೆ ತರಿಸಲಾಗಿದ್ದ ಸುಧಾರಿತ ಕಬ್ಬಿಣದ ಮುದ್ರಣಯಂತ್ರವನ್ನು ೧೮೫೪ ರಲ್ಲಿ ಮಂಗಳೂರಿಗೆ ವರ್ಗಾಯಿಸಲಾಯಿತು. ಇದರಿಂದಾಗಿ ಕರ್ನಾಟಕದ ಮೊದಲ ಮುದ್ರಣ ಕೇಂದ್ರದ ಕಾರ್ಯವು ಸ್ಥಗಿತಗೊಂಡಿತು.

**ಬಳ್ಳಾರಿ ಮಿಷನ್ ಕೇಂದ್ರದಲ್ಲಿ ಮುದ್ರಣಗೊಂಡ ಪುಸ್ತಕಗಳು[೧೯]**

| ಮುದ್ರಿತ ವರ್ಷ | ವಿಷಯ | ಪ್ರತಿಗಳು |
|---|---|---|
| ೧೮೨೧ | ಸುವಾರ್ತೆಯ ಕರಪತ್ರಗಳು | ೧೦೦೦ |
| ೧೮೩೦ | ಕನ್ನಡ ಹೊಸ ಒಡಂಬಡಿಕೆ | ೧೦೦೦ |
| ೧೮೩೧ | ಹಳೆ ಮತ್ತು ಹೊಸ ಒಡಂಬಡಿಕೆ ಕನ್ನಡ ಬೈಬಲ್ | ೧೦೦೦ |
| ೧೮೩೧ | ಇಪ್ಪತ್ತೆಂಟು ವಿಷಯಗಳನ್ನು ಕುರಿತ ಕರಪತ್ರಗಳು | ೩೦೦ |
| ೧೮೩೧ | ಇಂಗ್ಲಿಷ್ ಕರಪತ್ರಗಳು | ೧೦೦೦ |
| ೧೮೩೨ | ಕನ್ನಡ ಈಸೋಪನ ಕಥೆಗಳು | ೧೦೦೦ |
| ೧೮೩೩ | ಗಣಿತ ಪುಸ್ತಕ | |
| ೧೮೩೩ | ಕನ್ನಡದಲ್ಲಿ ಯಾತ್ರಿಕನ ಸಂಚಾರ ಭಾಗ ಒಂದು | |
| ೧೮೩೩ | ತೆಲುಗು ಶಬ್ದಕೋಶ | |
| ೧೮೪೦ | ಇಂಗ್ಲಿಷ್ ಕನ್ನಡ ಪಾಠ ಬೋಧೆ | |
| ೧೮೪೩ | ಕನ್ನಡ ಭೂಗೋಳ ಶಾಸ್ತ್ರ | ೨೫೦ |
| ೧೮೪೪ | ಕನ್ನಡ ವಾರ್ತಾ ಪತ್ರಿಕೆ ೨೦ ಸಂಚಿಕೆಗಳು | ೧೧೮೦೦ |

| | | |
|---|---|---|
| ೧೮೪೫ | ಕನ್ನಡ ವಾರ್ತಾ ಪತ್ರಿಕೆ ನಾಲ್ಕು ಸಂಚಿಕೆಗಳು | ೧೯೦೦ |
| ೧೮೪೫ | ಕನ್ನಡ ಪ್ರಪಂಚ ಸರಳ ಚರಿತ್ರೆ | ೫೦೦ |
| ೧೮೪೬ | ಇಂಗ್ಲಿಷ್ ಭೂಗೋಳ ಶಾಸ್ತ್ರ | ೭೫೦ |
| ೧೮೪೬ | ಕನ್ನಡ ಪ್ರಪಂಚ ಸರಳ ಚರಿತ್ರೆ ಭಾಗ ಎರಡು | ೫೦೦ |
| ೧೮೪೬ | ಇಂಗ್ಲಿಷ್ ಕನ್ನಡ, ಕನ್ನಡ ಇಂಗ್ಲಿಷ್ ಶಬ್ದಕೋಶ | ೭೫೦ |
| ೧೮೪೭ | ಕನ್ನಡ ಸಾಮಾನ್ಯ ಚರಿತ್ರೆ | ೫೦೦ |



ಮಿಷನರಿಗಳ ಮುದ್ರಣ ಕಾರ್ಯದ ಒಂದು ಭಾಗವಾಗಿ ಸಾರ್ವಜನಿಕ ಶಾಸನ ಎನ್ನಿಸಿದ ಪತ್ರಿಕೋದ್ಯಮವನ್ನು ಇಲ್ಲಿ ಪರಿಗಣಿಸಲಾಗಿದೆ.



ಕ್ರೈಸ್ತ ಧರ್ಮ ಪ್ರಚಾರಾರ್ಥವಾಗಿ ಕನ್ನಡದಲ್ಲಿ ಪತ್ರಿಕಾ ವ್ಯವಸಾಯ ಆರಂಭವಾಯಿತು. ಈ ರೀತಿಯಾಗಿ ಪ್ರಕಟಗೊಂಡ ಪತ್ರಿಕೆಗಳ ಸಂಖ್ಯೆ ಈವರೆಗೆ ಸುಮಾರು ೧೫೦ ಎಂದು ಅಂದಾಜಿಸಲಾಗಿದೆ. ಮಂಗಳೂರು ಸಮಾಚಾರ, ಕಂನಡ ಸುವಾರ್ತಕ, ಕಂನಾಡ ಸುವಾರ್ತೆ, ಅರುಣೋದಯ ಅವುಗಳಲ್ಲಿ ಕೆಲವು.[೨೦]

ಭಾರತದ ಮೊದಲ ವಾರ್ತಾ ಪತ್ರಿಕೆ 'ಬೆಂಗಾಲ್ ಗೆಜೆಟ್' ಅಥವಾ 'ಕಲ್ಕತ್ತಾ ಜನರಲ್ ಅಡ್ವಟೈಸರ್' ಎಂಬುದಾಗಿದೆ. ಈ ಪತ್ರಿಕೆಯು ಜೇಮ್ಸ್ ಅಗಸ್ಟಸ್ ಹಿಕ್ಕಿರವರಿಂದ ೧೭೮೦ ರಲ್ಲಿ ಆರಂಭವಾಯಿತು. ಒಂದು ವರ್ಷದ ತರುವಾಯ, ಮಿಷನರಿಯೊಬ್ಬರು ದೂರು ನೀಡಿದ ಕಾರಣಕ್ಕಾಗಿ ರದ್ದಾಯಿತು.[೨೧] ಮದ್ರಾಸ್‌ನ 'ಮದ್ರಾಸ್ ಕೋರಿಯರ್' ಎಂಬ ವಾರ ಪತ್ರಿಕೆಯು ೧೭೮೫ ರಲ್ಲಿ ಸರ್ಕಾರದ ಕೃಪಾಕಟಾಕ್ಷದಲ್ಲಿ ಆರಂಭಿಸಲಾಯಿತು. ಬಾಂಬೆ ಪ್ರಾಂತ್ಯದಲ್ಲಿ 'ಬಾಂಬೆ ಹೆರಾಲ್ಡ್' ಪತ್ರಿಕೆಯು ೧೭೮೯ ರಲ್ಲಿ ಪ್ರಕಟಣೆ ಕಂಡಿತು. ಮುಂದುವರೆದಂತೆಲ್ಲಾ ಪ್ರಾಂತ್ಯವಾರು ಮತ್ತು ಭಾಷಾವಾರು ಪತ್ರಿಕೆಗಳು ಆರಂಭವಾದವು. ೧೭೯೯ ರಲ್ಲಿ ವೆಲ್ಲೆಸ್ಲಿಯು ಮುದ್ರಣ ಕಾಯ್ದೆಯನ್ನು ಹೊರಡಿಸಿ ಇನ್ನು ಮುಂದೆ ವೃತ್ತಪತ್ರಿಕೆಗಳು ಜಾಹಿರಾತುಗಳನ್ನು ಒಳಗೊಂಡಂತೆ ಪತ್ರಿಕೆಯ ಪ್ರತಿ ಸಾಕ್ಷ್ಯ(Proof Sheet)ಹಾಳೆಗಳನ್ನು ಸರ್ಕಾರಕ್ಕೆ ಮುದ್ರಣದ ಪೂರ್ವದಲ್ಲಿ ಸಲ್ಲಿಸುವಂತೆ ಆದೇಶೀಸಿದನು.[೨೨] ಈ ಆದೇಶವನ್ನು ಮೀರಿದ ಸಂಪಾದಕರನ್ನು ಯುರೋಪಿಗೆ ಗಡಿಪಾರು ಮಾಡಲಾಗುತ್ತಿತ್ತು. ಇಂತಹ ನಿಯಮ ಕೆಲ ವರ್ಷಗಳ ನಂತರ ಕಲ್ಕತ್ತಾ ಮತ್ತು ಬಾಂಬೆ ಪ್ರಾಂತ್ಯಗಳಲ್ಲಿ ಸಡಿಲವಾಯಿತು. ಆದರೆ ಇಂಡಿಯಾ ಹೆರಾಲ್ಡ್, ಮದ್ರಾಸ್ ಗೆಜೆಟ್ ಪತ್ರಿಕೆಗಳು ಸರ್ಕಾರದ ವಿರುದ್ಧ ವರದಿ ಮಾಡಿದ್ದಾರೆ ಎಂಬ ಕಾರಣಕ್ಕಾಗಿ ಮದ್ರಾಸ್ ಪ್ರಾಂತ್ಯದಲ್ಲಿ ೧೮೨೨ ರ ನಂತರವೂ ಸೆನ್ಸಾರ್ (Censorship) ಪದ್ಧತಿ ಜಾರಿಯಲ್ಲಿತ್ತು. ಈ ಸೆನ್ಸಾರ್ ಪದ್ಧತಿಯನ್ನು ಸಮರ್ಥಿಸಿಕೊಂಡ ಥಾಮಸ್ ಮನ್ರೂರವರು ಹೀಗೆ ಹೇಳಿದ್ದಾರೆ. ಮುಕ್ತ ಪತ್ರಿಕೆಗಳು ದೇಶೀಯರಲ್ಲಿ ಸ್ವಾತಂತ್ರ್ಯದ ಸ್ಫೂರ್ತಿಯನ್ನು ಕೆರಳಿಸಬಹುದು, ಇದರಿಂದ ಬ್ರಿಟಿಷರು ಭಾರತದ ಮೇಲೆ ಹೊಂದಿರುವ ಸಾರ್ವಭೌಮತ್ವವು ಅಳಿಯಬಹುದು.[೨೩] ಈ ಅಭಿಪ್ರಾಯದ ಥಾಮಸ್ ಮನ್ರೂ ತನ್ನ ಆಳ್ವಿಕೆಯ ಅವಧಿಯಲ್ಲಿಯೇ ಬಳ್ಳಾರಿ ಮಿಷನರಿಗಳು ಮುದ್ರಣ ಯಂತ್ರವನ್ನು ಹೊಂದಲು ಅನುಮತಿಸಿದ್ದು ಸ್ಮರಣೀಯ.

ಭಾರತದಲ್ಲಿ ಪತ್ರಿಕೋದ್ಯಮವು ಪ್ರಗತಿ ಕಂಡದ್ದು ೧೮೪೦-೫೦ ರ ಅವಧಿಯಲ್ಲಿ, ಸರಿಯಾಗಿ ಇದೇ ಹೊತ್ತಿಗೆ ಬಳ್ಳಾರಿಯ ಮುದ್ರಣ ಕೇಂದ್ರವು ಕನ್ನಡ ಪತ್ರಿಕೋದ್ಯಮಕ್ಕೆ ಹೊಸ ತಿರುವನ್ನು ನೀಡಿತು. ಅದೇನೆಂದರೆ ೧೮೪೪ ರಲ್ಲಿ ಮಾರ್ಚ್‌ನಲ್ಲಿ ಕನ್ನಡದ ಎರಡನೆ ವಾರ್ತಾ ಪತ್ರಿಕೆಯಾಗಿ 'ಕಂನಡ ಸಮಾಚಾರ'(Canarese News Paper)ವು ಪ್ರಕಟಣೆ ಕಂಡಿತು. ಇದರ ಕಾರಣ ಕರ್ತೃ ಬಾಸೆಲ್ ಮಿಷನ್ನಿನ ಮಿಷನರಿಯಾದ ಹರ್ಮನ್ ಮೋಗ್ಲಿಂಗ್‌ರವರು. ಇವರು ೧೮೪೩ ಜುಲೈ ೦೧ ರಂದು[೨೪] ಆರಂಭಿಸಿದ್ದ ಮಂಗಳೂರು ಸಮಾಚಾರವೆಂಬ ಕನ್ನಡದ ಪ್ರಥಮ ಪತ್ರಿಕೆಯು ನಿರೀಕ್ಷಿಸಿದ ಪ್ರಚಾರ ಗಿಟ್ಟಿಸಲಿಲ್ಲ. ಈ ಕಾರಣವೂ ಸೇರಿದಂತೆ

ಬಳ್ಳಾರಿಯಲ್ಲಿದ್ದ ಲೋಹದ ಅಚ್ಚು ಮೊಳೆಗಳಿಂದ ಕೂಡಿದ, ಅಂದವಾಗಿ ಮುದ್ರಿಸಬಹುದಾದ ಯಂತ್ರದಲ್ಲಿ ಮುದ್ರಿಸುವ ಮೂಲಕ ಆ ಪತ್ರಿಕೆಯ ವ್ಯಾಪಕತೆ ಹೆಚ್ಚಿಸಲು ಹೊಸ ಶೀರ್ಷಿಕೆಯೊಂದಿಗೆ ಬಳ್ಳಾರಿಯಲ್ಲಿ ಆರಂಭಿಸಿದರು. ಈ ಪತ್ರಿಕೆಯ ಸ್ಥಳೀಯ ವರ್ತಮಾನಗಳನ್ನು, ಆಡಳಿತದ ಅದರಲ್ಲೂ ನ್ಯಾಯಾಂಗದ ಆದೇಶಗಳನ್ನು, ಕಟ್ಲೆಗಳನ್ನು ಕುರಿತ ವರದಿಗಳನ್ನು ಹೊಂದಿರುತ್ತಿತ್ತು. ಅಲ್ಲದೆ ನೀತಿ ಕಥೆಗಳನ್ನು ಮತ್ತು ಆ ಕಥೆಗಳಿಗೆ ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದಂತೆ ತಾತ್ಪರ್ಯವನ್ನು ನೀಡಿದ ಅಂಕಣಗಳಿಂದ ಕೂಡಿದ್ದಿತು. ಐ. ಮಾ. ಮುತ್ತಣ್ಣನವರ ಕೃತಿ '೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಸೇವೆ'ಯಲ್ಲಿ ಪುಟ ೩೬೮ ರಿಂದ ೩೭೯ ರ ಮಧ್ಯದಲ್ಲಿ ಹಲವು ಫೋಟೋ ಪ್ರತಿಗಳನ್ನು ನೀಡಲಾಗಿದೆ. ಅವುಗಳಲ್ಲಿ ಬಳ್ಳಾರಿ ಮುದ್ರಣ ಕೇಂದ್ರದಲ್ಲಿ ೧೮೪೪ ರ ಸೆಪ್ಟೆಂಬರ್ ೧೫ ರಂದು ಪ್ರಕಟ ಕಂಡ ಕಂನಡ ಸಮಾಚಾರ ಪತ್ರಿಕೆಯ ಮುಖಪುಟವೂ ಸೇರಿದೆ.

ದೂರದ ಮಂಗಳೂರಿನಿಂದ ಸಂಪಾದಕತ್ವ ನಿರ್ವಹಿಸುವುದು ಮೋಗ್ಲಿಂಗರಿಗೆ ಕಷ್ಟವಾಯಿತು ಮತ್ತು ಬಳ್ಳಾರಿಯ ಮುದ್ರಣ ಕೇಂದ್ರಕ್ಕೆ ಸೂಕ್ತ ವಾರಸುದಾರರು ಇರಲಿಲ್ಲ. ಅಲ್ಲದೆ ಬಳ್ಳಾರಿಯಲ್ಲಿಯ ಭಾಷಾ ಗೊಂದಲದಿಂದಾಗಿ ' ಕಂನಡ ಸಮಾಚಾರ' ಪತ್ರಿಕೆ ವಿಪುಲವಾಗಿ ಬೆಳೆಯಲು ಸಾಧ್ಯವಾಗಲಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಕಂನಡ ಸಮಾಚಾರವು ಪ್ರಕಟಣೆ ಕಂಡ ವರ್ಷಾಂತ್ಯದಲ್ಲಿಯೇ ಅಂತ್ಯ ಕಂಡಿತು.

### ೪.೩ ಮತಾಂತರ

ಮಿಷನರಿಗಳ ಆದ್ಯ ಗುರಿ ಕ್ರೈಸ್ತೇತರರನ್ನು ಕ್ರೈಸ್ತ ಮತಕ್ಕೆ ಮತಾಂತರ(Convert)ಗೊಳಿಸುವುದಾಗಿದ್ದಿತು. ಈ ಕಾರ್ಯವನ್ನು ನೇರವಾಗಿ ಸಾಧಿಸಲಾಗದ ಮಿಷನರಿಗಳು, ನಯವಾಗಿ ಕ್ರೈಸ್ತ ಧರ್ಮದಲ್ಲಿನ ಒಳಿತನ್ನು ತಿಳಿಯಪಡಿಸಬೇಕು, ಆಗ ಮಾತ್ರ ಮತಾಂತರ ಕಾರ್ಯಕ್ಕೆ ಯಶಸ್ಸು ಸಾಧ್ಯ ಎಂದರಿತರು. ಅಲ್ಲದೆ ಮಿಷನರಿಗಳ ಈ ಕಾರ್ಯಕ್ಕೆ ಅಧಿಕಾರಶಾಹಿಯ ಬೆಂಬಲವೂ ಆರಂಭದಲ್ಲಿ ದೊರೆತಿರಲಿಲ್ಲ. ಆ ಕಾರಣಕ್ಕಾಗಿ ಮಿಷನರಿಗಳು ಅನುಸರಿಸಿದ ಮಾರ್ಗಗಳೇ, ಅವರ ಸೇವಾ ಕಾರ್ಯಚಟುವಟಿಕೆಗಳಾಗಿವೆ. ಹಾಗಾಗಿ ಮಿಷನರಿಗಳ ಕಾರ್ಯಚಟುವಟಿಕೆಗಳೊಟ್ಟಿಗೆ ಮತಾಂತರದ ಪ್ರಸ್ತಾಪ ಇಲ್ಲಿ ಅಗತ್ಯವೆನಿಸುತ್ತದೆ.

ಮಿಷನರಿಗಳು ಬಂದಂತಹ ಮೊದಲ ದಿನಗಳಲ್ಲಿ ಇಲ್ಲಿನ ಅನ್ಯ ಧರ್ಮವ್ಯವಸ್ಥೆಯಲ್ಲಿನ ನ್ಯೂನ್ಯತೆಗಳನ್ನು ಗುರುತಿಸಿದರು. ಮತ್ತು ತಮ್ಮ ಕ್ರೈಸ್ತ ಧರ್ಮವು ಸ್ಥಳೀಯ ಧರ್ಮಗಳಿಗಿಂತ ಉತ್ತಮ ಎಂಬುದನ್ನು ತಿಳಿಯಪಡಿಸಲು ಅನ್ಯ ಮತಗಳನ್ನು ಟೀಕಿಸಲು ಆರಂಭಿಸಿದರು.[೨೫] ಮಿಷನರಿಗಳ ಬೋಧನೆಯ ಬಹುಭಾಗ ಈ ರೀತಿಯ ಟೀಕೆಗಳಿಂದಲೇ ಕೂಡಿರುತ್ತಿತ್ತು.

### ಬ್ಯಾಪ್ಟಿಸಂ

ಬ್ಯಾಪ್ಟಿಸಂ ಕ್ರೈಸ್ತರ ಪ್ರಮುಖ ಸಂಸ್ಕಾರಗಳಲ್ಲಿ ಒಂದು. ಇದನ್ನು ಸ್ನಾನದೀಕ್ಷೆ ಅಥವಾ ದೀಕ್ಷಾಸ್ನಾನ ಎಂದು ಕನ್ನಡದಲ್ಲಿ ಕರೆಯುತ್ತಾರೆ. ಸಾಮಾನ್ಯವಾಗಿ ಕ್ರೈಸ್ತ ತಂದೆ-ತಾಯಂದಿರುಗಳು ತಮ್ಮ ಮಕ್ಕಳು ಎರಡು-ಮೂರು ತಿಂಗಳಿನ ಶಿಶುವಾಗಿರುವಾಗಲೇ ಈ ದೀಕ್ಷೆಯನ್ನು ಕೊಡಿಸುತ್ತಾರೆ. ಈ ಮಕ್ಕಳು ಪ್ರಾಯಕ್ಕೆ ಬಂದ ನಂತರ ವಿವಾಹ ಪೂರ್ವದಲ್ಲಿ ಆಚರಿಸುವ 'ದೃಢೀಕರಣ' ಎಂಬ ಮತ್ತೊಂದು ಸಂಸ್ಕಾರದ ಮೂಲಕ ಕ್ರೈಸ್ತ ಧರ್ಮದ ಅನುಸರಣೆಗೆ ಸಮ್ಮತಿ ನೀಡುತ್ತಾರೆ. ಅನ್ಯ ಮತೀಯರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಿಸುವಾಗ ವಿಶೇಷವಾಗಿ ಅಂತರ್ಮತೀಯ ವಿವಾಹ ಸಂದರ್ಭದಲ್ಲಿ ಈ ಸಂಸ್ಕಾರ ಪ್ರಾಮುಖ್ಯವೆನ್ನಿಸುತ್ತದೆ. ಕ್ಯಾಥೋಲಿಕ್‌ರ ಆಚರಣೆಯಲ್ಲಿರುವಂತೆ ಮತಾಂತರಗೊಳ್ಳುವವರನ್ನು ಚರ್ಚಿಗೆ ಕರೆಯಿಸಿ, ಕ್ರೈಸ್ತ ಸಮುದಾಯದ ಸಮ್ಮುಖದಲ್ಲಿ ಹಿರಿಯ ಪಾದ್ರಿಯು ಪವಿತ್ರ ನೀರನ್ನು ಅವರ ಮೇಲೆ ಪ್ರೋಕ್ಷಿಸುವ ಮೂಲಕ ಆ ವ್ಯಕ್ತಿಯನ್ನು ಶುದ್ಧಗೊಳಿಸಿ

ಅಧಿಕೃತವಾಗಿ ಕ್ರೈಸ್ತ ಮತಕ್ಕೆ ಸೇರಿಸಿಕೊಳ್ಳುತ್ತಾರೆ. ಪ್ರಾಟೆಸ್ಟೆಂಟರು ಇದೇ ಸಂಸ್ಕಾರವನ್ನು ಮತ್ತೊಂದು ಪ್ರಕಾರದಲ್ಲಿ ಆಚರಿಸುತ್ತಾರೆ. ಮತಾಂತರ ಆಗಬಯಸಿದ ವ್ಯಕ್ತಿಯನ್ನು ಪಾದ್ರಿಯು ನಡುಮಟ್ಟದ ಹರಿಯುವ ನೀರಿನಲ್ಲಿ ಮುಳುಗಿಸಿ-ಏಳಿಸುವ ಮೂಲಕ ಆ ವ್ಯಕ್ತಿಯ ಈ ಮೊದಲಿನ ಜೀವನ ಕಳೆದು ಹೋಗಿ, ಕ್ರೈಸ್ತ ಧರ್ಮದೊಂದಿಗೆ ಹೊಸಹುಟ್ಟು, ಹೊಸಜೀವನ ಪಡೆದಂತಾಗುವುದು. ಅಲ್ಲದೆ ಈ ಸಂದರ್ಭದಲ್ಲಿ ಕ್ರೈಸ್ತರ ಹಿನ್ನೆಲೆಯ ದೇವದೂತರ ಅಥವಾ ಸಂತರುಗಳ ಹೆಸರನ್ನು ವ್ಯಕ್ತಿಗೆ ಇಡಲಾಗುತ್ತದೆ.

೧೯ನೇ ಶತಮಾನದ ಪೂರ್ವದಲ್ಲಿ ಮಿಷನರಿಗಳಿಗೆ ಮತಾಂತರ ಕಾರ್ಯದಲ್ಲಿ ಸಿಕ್ಕಂತಹ ಸಫಲತೆ ಅತೀ ಕಡಿಮೆ ಎಂದೆನ್ನಬಹುದು. ಕೆಲವು ಮಿಷನರಿಗಳು ನಿರ್ದಿಷ್ಟ ಪ್ರದೇಶದಲ್ಲಿ ಹಲವು ವರ್ಷಗಳ ಕಾಲ ಸೇವೆ ಸಲ್ಲಿಸಿದ ಬಳಿಕವೂ, ಯಾರೊಬ್ಬರು ಮತಾಂತರಗೊಳ್ಳದ ನಿದರ್ಶನಗಳಿವೆ. ಅದೆ ೧೯ನೇ ಶತಮಾನದಲ್ಲಿ ಭಾರೀ ಸಂಖ್ಯೆಯಲ್ಲಿ ಮತಾಂತರ ಕಾರ್ಯಗಳು ನಡೆದವು.[೨೬] ಮತಾಂತರ ಪ್ರಮಾಣ ಈ ಅವಧಿಯಲ್ಲಿ ಹೆಚ್ಚಲು ಪ್ರಕೃತಿ ವಿಕೋಪಗಳು ಮತ್ತು ಆಡಳಿತಶಾಹಿ ನಿಯಮಗಳು ಪ್ರೇರಕವಾದವು. ಬ್ರಾಹ್ಮಣರೂ ಸೇರಿದಂತೆ ಮೇಲ್ವರ್ಗದವರು ಮಿಷನರಿಗಳ ಆರಂಭದ ದಿನಗಳಲ್ಲಿ ಮತಾಂತರ ಪ್ರಕ್ರಿಯೆಗೆ ಒಳಪಟ್ಟಿದ್ದರು. ಹೀಗೆ ಮತಾಂತರ ಹೊಂದಿದವರು ಆರ್ಥಿಕ ಮತ್ತು ಸಾಮಾಜಿಕ ದೂಷಣೆಗೆ ಒಳಗಾದರು. ಅಲ್ಲದೆ ಮತಾಂತರದಲ್ಲಿ ಅಸ್ಪೃಶ್ಯರ ಸಂಖ್ಯೆಯು ಹೆಚ್ಚಾಗತೊಡಗಿತು. ಇವೆಲ್ಲದರ ಪರಿಣಾಮ ಮೇಲ್ವರ್ಗದವರು ಮತಾಂತರದಲ್ಲಿನ ತಮ್ಮ ಒಲವನ್ನು ಕಳೆದುಕೊಂಡರು.

ಕ್ರೈಸ್ತರಾಗಿ ಮತಾಂತರ ಹೊಂದಿದ ಮೇಲ್ಜಾತಿಯವರು, ಮತಾಂತರ ಹೊಂದಿದ ಕೆಳಜಾತಿಯವರಿಂದ ಪ್ರತ್ಯೇಕವಾಗಿ ಗುರುತಿಸಿಕೊಳ್ಳಲು ಪ್ರಯತ್ನಿಸಿದರು. ಇವರುಗಳು ಚರ್ಚಿನಲ್ಲಿ ಒಟ್ಟಿಗೆ ಕುಳಿತುಕೊಳ್ಳುತ್ತಿರಲಿಲ್ಲ, ಸಹ ಭೋಜನವನ್ನು ಇಚ್ಛಿಸುತ್ತಿರಲಿಲ್ಲ ಮತ್ತು ವಿವಾಹವಾಗಲು ವಿರೋಧಿಸುತ್ತಿದ್ದರು.[೨೭] ಕ್ರೈಸ್ತ ಧರ್ಮದೊಳಗೆ ಉಂಟಾದ ಈ ಜಾತಿಯ ಬೇಧ-ಭಾವಗಳನ್ನು ಮತ್ತು ಮೇಲ್ಜಾತಿಗಳ ಪ್ರಾಬಲ್ಯವನ್ನು ಮಿಷನರಿಗಳು ಖಂಡಿಸಿದರು. ಜೊತೆಗೆ ಶೋಷಣೆಗೆ ಒಳಗಾಗುತ್ತಿದ್ದ ಕೆಳವರ್ಗದವರಿಗೆ ತಮ್ಮ ಸಹಾನುಭೂತಿಯನ್ನು ತೋರಿದರು. ೧೮೫೦ ರಲ್ಲಿ 'ಜಾತಿ ಅನರ್ಹತೆ ರದ್ಧತಿ ಕಾಯ್ದೆ'ಯನ್ನು ಬ್ರಿಟಿಷ್ ಸರ್ಕಾರ ಜಾರಿಗೆ ತರುವಲ್ಲಿ ಮಿಷನರಿಗಳ ಪ್ರಭಾವವೂ ಇದ್ದಿತು.[೨೮] ಹೀಗೆ ಮಿಷನರಿಗಳಿಂದಾಗಿ ಕೆಳವರ್ಗದವರು ಹೊಸ ಅರ್ಹತೆಗಳನ್ನು ಪಡೆಯುವಂತಾದರು. ೧೮೩೫ ಮತ್ತು ೧೮೮೫-೯೦ ರಲ್ಲಿ ಸಂಭವಿಸಿದ ಭೀಕರ ಪ್ಲೇಗ್ ಹಾಗೂ ಕ್ಷಾಮಗಳಿಗೆ ಬೆದರಿದ ಬಡಜನತೆಯು, ಆಸ್ಪತ್ರೆ ಸೌಲಭ್ಯ ನೀಡುತ್ತಿದ್ದ ಹಾಗೂ ವಿದೇಶಗಳಿಂದ ಆಹಾರ ತರಿಸಿ ಕೊಡುತ್ತಿದ್ದ ಮಿಷನರಿಗಳ ಕೈಗೊಂಬೆಗಳಂತಾಗಿ ನಂತರ ಭದ್ರತೆಯನ್ನು ಬಯಸಿ ಮತಾಂತರ ಹೊಂದಿದರು. ಮಿಷನರಿಗಳು ಚರ್ಚ್, ಆಸ್ಪತ್ರೆ ಮತ್ತು ಶಿಕ್ಷಣ ಕೇಂದ್ರಗಳನ್ನು ಮಾತ್ರವಲ್ಲದೆ ಸೆರೆಮನೆಗಳನ್ನು ಮತ್ತು ಉದ್ಯೋಗ ತರಬೇತಿ ಕೇಂದ್ರಗಳನ್ನು ಸಹ ಮತಾಂತರ ಕಾರ್ಯದ ಮೂಲವಾಗಿಸಿಕೊಂಡಿದ್ದರು.[೨೯]

ಕರ್ನಾಟಕದಲ್ಲಿರುವ ಹಲವು ಜಾತಿಯ ಜನರುಗಳು ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ್ದಾರೆ. ಆದಿ ಆಂಧ್ರ, ಆದಿ ದ್ರಾವಿಡ, ಆದಿ ಕರ್ನಾಟಕ, ಬಣಜಿಗ, ಬ್ರಾಹ್ಮಣ, ದೇವಾಂಗ, ತುಳು, ವಡ್ಡ, ವಕ್ಕಲಿಗ, ಗೊಲ್ಲ, ಕುರುಬ, ಲಂಬಾಣಿ, ಮಾದಿಗ, ಮಹರ್, ರೆಡ್ಡಿ ಅವುಗಳಲ್ಲಿ ಮುಖ್ಯವಾದವುಗಳು.[೩೦] ಇಷ್ಟೇ ಅಲ್ಲದೆ ಗೌಡಿಕ್ರೈಸ್ತ, ಚರೋಡಿ ಕ್ರೈಸ್ತ ಎಂಬ ಎರಡು ವಿಶೇಷ ಪಂಗಡಗಳು ಕರ್ನಾಟಕದಲ್ಲಿ ಕಂಡುಬರುತ್ತವೆ.[೩೧]

ಲಂಡನ್ ಮಿಷನ್ ಸೊಸೈಟಿಯ ಮಿಷನರಿಗಳ ಸೇವೆಯಿಂದಾಗಿ ಬಳ್ಳಾರಿಯಲ್ಲಿ ಮತಾಂತರ ಕಾರ್ಯಗಳು ಮೊದಲ್ಗೊಂಡವು. ಬಳ್ಳಾರಿ ನಗರವನ್ನು ಕೇಂದ್ರವಾಗಿಟ್ಟುಕೊಂಡು ಈ ಮಿಷನರಿಗಳು ಸೇವೆ ಆರಂಭಿಸಿದರಾದ್ದರಿಂದ ಜಿಲ್ಲೆಯ ಪಶ್ಚಿಮ ಭಾಗದ ರಾವಿಹಾಳ, ಬೊಮ್ಮಲಾಪುರ, ಕೊತ್ತಲಚಿಂತೆ, ಅಗಸನೂರು, ಮಿಟ್ಟೆಸೂಗೂರು,

ಹಚ್ಚೋಳಿ, ಟಿ.ಎಸ್.ಕುಡ್ಲೂರು, ಚಿಕ್ಕಬಳ್ಳಾರಿ, ಬೀರಹಳ್ಳಿ, ಮುರವೇಣಿ, ಬಸ್ರಳ್ಳಿ, ರಾರಾವಿ, ಕುಡದರಹಾಳ್ ಮುಂತಾದ ಗ್ರಾಮಗಳಲ್ಲಿ ಮಿಷನರಿಗಳ ಮತಾಂತರದ ಪ್ರಭಾವ ಕಂಡುಬರುತ್ತದೆ. ಆರಂಭದಲ್ಲಿ ಬಂದ ಜಾನ್ ಹ್ಯಾಂಡ್ಸ್, ವಿಲಿಯಂ ರೀವ್, ಜಾನ್ ರೀಡ್‌ರಂತಹ ಮಿಷನರಿಗಳು ವಿದ್ವಾಂಸ ಗುಣದವರಾಗಿದ್ದರು. ಹಾಗಾಗಿಯೇ ಅವರುಗಳು ಶಬ್ದಕೋಶ ರಚನೆ, ಭಾಷಾಂತರ, ಮುದ್ರಣದಂತಹ ಕಾರ್ಯಗಳಲ್ಲಿ ತೊಡಗಿಸಿಕೊಂಡದ್ದು ಕಂಡುಬರುತ್ತದೆ.[೩೨] ಇದರಿಂದಾಗಿಯೇ ಈ ಅವಧಿಯಲ್ಲಿ ಮತಾಂತರ ಕಾರ್ಯಗಳ ದಾಖಲೆಗಳು ದೊರೆತಿಲ್ಲ ಎಂದು ಹೇಳಬಹುದು. ಇವರ ನಂತರ ಬಂದ ಮಿಷನರಿಗಳು ಧರ್ಮಸೇವೆಗೆ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಂಡರು. ಬಳ್ಳಾರಿ ನಗರ ಹೊರತಲ್ಲದೆ ಸುತ್ತಲಿನ ಗ್ರಾಮಗಳಲ್ಲಿ ಚರ್ಚುಗಳನ್ನು ಸ್ಥಾಪಿಸಿದರು. ಅಲ್ಲಿ ಧರ್ಮ ಪ್ರಸಾರದೊಟ್ಟಿಗೆ ಸ್ಥಳೀಯ ಗ್ರಾಮವಾಸಿಗಳಿಗೆ ತಮ್ಮ ಒಲವು ತೋರುವ ಮೂಲಕ ಕ್ರೈಸ್ತ ಧರ್ಮದೆಡೆಗೆ ಸ್ಥಳೀಯರನ್ನು ಆಕರ್ಷಿಸಿದರು. ಪರಿಣಾಮ ಅಪರೂಪಕ್ಕೊಮ್ಮೆ ಮೇಲ್ಜಾತಿಯವರು ಮತಾಂತರ ಹೊಂದಲಾರಂಭಿಸಿದರು. ಬಳ್ಳಾರಿ ಪ್ರದೇಶದಲ್ಲಿ ಕೆಳವರ್ಗದವರ ಮತಾಂತರ ಹೇರಳವಾಗಿ ನಡೆದದ್ದು ೨೦ನೇ ಶತಮಾನದ ಆರಂಭದಲ್ಲಿ.[೩೩] ಇದನ್ನು ಕಂಡಂತಹ ದಲಿತೇತರರು ಕ್ರೈಸ್ತ ಧರ್ಮವು ಅಸ್ಪೃಶ್ಯರಿಗಾಗಿ ಹುಟ್ಟಿ ಬಂದ ಧರ್ಮವೆಂದು ಅರ್ಥೈಸಿದರು. ಬಳ್ಳಾರಿ ವ್ಯಾಪ್ತಿಯಲ್ಲಿಯೂ ಮಿಷನರಿಗಳು ದಲಿತರ ಮೇಲಾಗುತ್ತಿದ್ದ ದೌರ್ಜನ್ಯಗಳ ವಿರುದ್ಧ ಪ್ರತಿಭಟಿಸಿದ್ದುಂಟು. ಕ್ರೈಸ್ತ ಧರ್ಮವು ತಮಗೆ ಹೊಸ ಜೀವನ ಪದ್ಧತಿ ರೂಪಿಸಿಕೊಡುತ್ತದೆ ಎಂದು ತಿಳಿದ ದಲಿತರು ಮಿಷನರಿಗಳ ಆಪೇಕ್ಷೆಯನ್ನು ಮೀರಿ ಗ್ರಾಮಗಳ ರೂಪದಲ್ಲಿ ಮತಾಂತರ ಹೊಂದಿದ್ದರು. ೧೯೨೮ ರಲ್ಲಿ ಹಚ್ಚೋಳಿ, ೧೯೩೮ ರಲ್ಲಿ ಹಾಲ್ವಿ, ೧೯೩೨ ರಲ್ಲಿ ಮೀನಳ್ಳಿ, ೧೯೩೮ ರಲ್ಲಿ ಸಂಗನಕಲ್ಲು, ಕರ್ಚೇಡು, ಮೋಕ ಮುಂತಾದ ಗ್ರಾಮಗಳ ದಲಿತರು ಮತಾಂತರವಾದರು. ನಂತರ ಈ ಗ್ರಾಮಗಳಲ್ಲಿ ಚರ್ಚುಗಳನ್ನು ಸ್ಥಾಪಿಸಲಾಯಿತು. ಮೇಲಿನ ಈ ಗ್ರಾಮಗಳ ಮತಾಂತರ ಹೊಂದಿದ ದಲಿತರಲ್ಲಿ ಬಹುತೇಕರು ಮಾದಿಗ ಜಾತಿಗೆ ಸೇರಿದವರಾಗಿದ್ದಾರೆ. ಮಾದಿಗ ಸಮುದಾಯವನ್ನು ಮಿಷನರಿಯಾದ ಫಾ. ಸೆಲ್ವಿಸ್ಟರ್ ಗೋಲ್ಡ್‌ರಿಕ್(೧೯೪೮)ರವರು 'ನಾನ್ ಕಾಸ್ಟ್ ಪ್ಯೂಪುಲ್' ಎಂದು ಕರೆದಿದ್ದಾರೆ.[೩೪]

ದಲಿತರು ಮತಾಂತರ ಹೊಂದಿದ ನಂತರ ದಲಿತ ಕ್ರೈಸ್ತರು ಎಂದು ಕರೆಯಲ್ಪಟ್ಟರು. ಅದೇ ರೀತಿ ಇವರ ಸಾಮಾಜಿಕ ಸ್ಥಿತಿಯಲ್ಲೂ ಯಾವುದೇ ಬದಲಾವಣೆಯಾಗಲಿಲ್ಲ. ಮಿಷನರಿಗಳು ಧರ್ಮ ಆಚರಣೆಗೆ ಸಂಬಂಧಿಸಿದಂತೆ ಮಾತ್ರ ಪ್ರೋತ್ಸಾಹ ನೀಡಿದರೇ ಹೊರತು ಅನ್ಯ ವೃತ್ತಿ ಕೌಶಲ್ಯಗಳನ್ನು ದಲಿತರು ಕೈಗೊಳ್ಳುವಂತೆ ಕಾರ್ಯ ಚಟುವಟಿಕೆಗಳನ್ನು ಈ ಭಾಗದಲ್ಲಿ ರೂಪಿಸಲಿಲ್ಲ. ಕಾರಣ ಹಳೆಯ ಕುಲಕಸುಬಗಳಿಗೆ ಅಂಟಿಕೊಂಡ ದಲಿತರಲ್ಲಿ ಬದಲಾವಣೆ ನಿರೀಕ್ಷಿಸಿದ ಮಟ್ಟದಲ್ಲಿ ಆಗಲಿಲ್ಲ. ಬಳ್ಳಾರಿ ನಗರ, ಹೊಸಪೇಟೆ, ಸಂಡೂರು, ಕಂಪ್ಲಿ, ಹಗರಿಬೊಮ್ಮನಹಳ್ಳಿ, ಕುರುಗೋಡು, ಕುಡುತಿನಿ, ಹೂವಿನ ಹಡಗಲಿ ಮುಂತಾದೆಡೆಗಳಲ್ಲಿರುವ ಕ್ಯಾಥೋಲಿಕ್ ಪಂಗಡದ ಮಿಷನರಿಗಳು ಬಳ್ಳಾರಿಯಲ್ಲಿ ನೆಲೆಸಿರುವ ಬಹುತೇಕ ತಮಿಳು ಭಾಷೆಯಾಡುವ (ದಲಿತ ಕೊಂಗರನ್ನು ಒಳಗೊಂಡಂತೆ) ಕ್ರೈಸ್ತರ ಧರ್ಮಸೇವೆ ಮತ್ತು ಸಾಮಾಜಿಕ ಸೇವೆಯಲ್ಲಿ ತೊಡಗಿದ್ದಾರೆ. ಪ್ರಾಟೆಸ್ಟೆಂಟ್‌ನ ಕೆಲವು ಮಿಷನರಿಗಳು ಇತ್ತೀಚಿನ ದಿನಗಳಲ್ಲೂ ಮತಾಂತರ ಕಾರ್ಯವನ್ನು ಸಕ್ರಿಯವಾಗಿ ಉಳಿಸಿಕೊಂಡು ಬಂದಿದ್ದಾರೆ. ಬಳ್ಳಾರಿ ನಗರದ ಸುತ್ತಲಿರುವ ಕಾರ್ಕಲ್‌ತೋಟ, ಮಿಂಚೇರಿ, ಜಾನಕುಂಟೆ, ಬೆಳಗಲ್, ಬಂಡಿಹಟ್ಟಿ, ಚಂದ್ರಕೋಟೆ, ಹಲಕುಂದಿ ಇನ್ನುಳಿದ ಅಭಿವೃದ್ಧಿ ಕಾಣದ ಪ್ರದೇಶಗಳನ್ನು ಕೇಂದ್ರವಾಗಿಟ್ಟುಕೊಂಡು ಕಾರ್ಯನಿರ್ವಹಿಸುತ್ತಿರುವ ಪ್ರಾಟೆಸ್ಟೆಂಟ್ ಮಿಷನರಿಗಳು ಆ ಪ್ರದೇಶಗಳಲ್ಲಿ ಅಧಿಕವಾಗಿರುವ ಹರಿಜನರನ್ನು ಮತ್ತು ಲಂಬಾಣಿಗರನ್ನು ಮತಾಂತರಿಸುತ್ತಿದ್ದಾರೆ. ಇದೇ ಮೂಲದ ಯುವಕ-ಯುವತಿಯರಿಗೆ ಉಪಯೋಜಕ ತರಬೇತಿಯನ್ನು ಕೊಡಿಸಿ, ಇವರ ಮೂಲಕ ಆ ಸಮುದಾಯದ ಮತ್ತಿನ್ನಿತರರನ್ನು ಮತಾಂತರಕ್ಕೆ ಪ್ರೇರೇಪಿಸುತ್ತಿದ್ದಾರೆ.

ಹೀಗೆ ಬಳ್ಳಾರಿಯಲ್ಲಿ ಕ್ರೈಸ್ತ ಮಿಷನರಿಗಳಿಂದ ಆದಂತಹ ಮತಾಂತರಗಳಿಂದ ಕೆಳವರ್ಗದ ಜನಗಳು ಕೆಲವಾರು ಸೌಲಭ್ಯಗಳನ್ನು ಮತ್ತು ನೆಮ್ಮದಿಯನ್ನು ಹೊಂದುವಂತಾದರು. ಆದರೂ ಸಾಮಾಜಿಕ ವ್ಯವಸ್ಥೆಯಲ್ಲಿ ದಲಿತರು ಸ್ವಮತೀಯರೊಂದಿಗೆ ಮತ್ತು ಸ್ವಜಾತಿಯವರೊಂದಿಗೆ ಹೊಂದಿದ್ದ ಅಂತರವು ಮತಾಂತರದಿಂದಾಗಿ ಮತ್ತಷ್ಟು ಹೆಚ್ಚಿತು ಎಂದು ಹೇಳಬಹುದು.

### ೪.೪ ಸಾಹಿತ್ಯ

ಯಾವುದನ್ನು ನಾವು ಕನ್ನಡದ ಆಧುನಿಕ ಸಾಹಿತ್ಯ ಎಂದು ಕರೆಯುತ್ತೇವೆಯೋ ಅದರ ಆರಂಭವನ್ನು ನಿಶ್ಚಿತವಾಗಿ ಹತ್ತೊಂಬತ್ತನೆಯ ಶತಮಾನ ಎಂದು ಗುರುತಿಸಲಾಗಿದೆ. ಇದೇ ಅವಧಿಯಲ್ಲಿ ಬಳ್ಳಾರಿಯಲ್ಲಿ ಹೊಸ ಸಾಹಿತ್ಯ ಪ್ರಕಾರಗಳು ಮೊದಲ ಬಾರಿಗೆ ಕಾಣಿಸಿಕೊಂಡವು. ಹೊಸಗನ್ನಡ ಗದ್ಯದಲ್ಲಿ ಬೈಬಲ್ ಭಾಷಾಂತರಕ್ಕೆ ಕೈ ಹಾಕಿದ ಜಾನ್ ಹ್ಯಾಂಡ್ಸ್ ಇಲ್ಲಿ ಬಂದ ವರ್ಷ(೧೮೧೦)ವನ್ನು ಶ್ರೀನಿವಾಸ ಹಾವನೂರರು ಹೊಸಗನ್ನಡದ ಅರುಣೋದಯದ ಆರಂಭ ವರ್ಷವೆಂದು ಕರೆದಿದ್ದಾರೆ.[೩೫] ಈ ಮೊದಲು ರಂ. ಶ್ರೀ. ಮುಗಳಿಯವರು ಸಹ ಹೊಸಗನ್ನಡ ಸಾಹಿತ್ಯ ಉದಯ ೧೮೨೦ ರಿಂದ ೧೮೩೦ ಎಂದು ಗುರುತಿಸಿದ್ದರು.[೩೬] ಹೀಗೆ ಕನ್ನಡ ಸಾಹಿತ್ಯದಲ್ಲಿ ಗದ್ಯಪ್ರಕಾರವು ಆರಂಭವಾದುದು ಬಳ್ಳಾರಿ ಮಿಷನರಿಗಳ ಮೂಲಕ ಎಂದು ಹೇಳಬಹುದು. ನಂತರ ಹೊಸಗನ್ನಡ ಸಾಹಿತ್ಯ ಬೆಳವಣಿಗೆಗೆ ಇಂಗ್ಲಿಷ್ ಶಿಕ್ಷಣವು ಪ್ರೇರಣೆಯಾಯಿತು ಎಂದು ಹೇಳಲಾಗುತ್ತದೆ.[೩೭]

ತಾಳೆಗರಿಗಳಲ್ಲಿದ್ದ ಕನ್ನಡ ಸಾಹಿತ್ಯವನ್ನು ಹಾಳೆಗಳ ಮೇಲೆ ಮುದ್ರಿಸುವ ಮೂಲಕ ಕೇವಲ ಭೌತಿಕ ರೂಪವನ್ನು ಮಾತ್ರ ನೀಡದೆ ಅನ್ಯ ಭಾಷೆಗಳಲ್ಲಿನ ಉತ್ತಮ ಸಾಹಿತ್ಯ ಕೃತಿಗಳನ್ನು ಬಳ್ಳಾರಿ ಮಿಷನ್ ಕೇಂದ್ರದಲ್ಲಿ ಕನ್ನಡಕ್ಕೆ ಭಾಷಾಂತರಿಸಲಾಯಿತು. ಹೀಗೆ ಕನ್ನಡ ಸಾಹಿತ್ಯಕ್ಕೆ ಹೊಸ ರೂಪು ಸೃಷ್ಟಿಸಿಕೊಟ್ಟವರು ಮಿಷನರಿಗಳು.

ಕನ್ನಡ ವ್ಯಾಕರಣ ಮತ್ತು ಕನ್ನಡ ಶಬ್ದಕೋಶ ರಚನೆಯಲ್ಲಿಯೂ ಬಳ್ಳಾರಿಯ ಜಾನ್ ಹ್ಯಾಂಡ್ಸ್, ವಿಲಿಯಂ ರೀವ್, ಜಾನ್ ರೀಡ್ ಆದ್ಯರಾಗಿದ್ದಾರೆ. ಭಾಷಾಧ್ಯಯನಕ್ಕೆ ಕೋಶಗಳು ಪ್ರಮುಖ ಆಕರ ಸಂಪತ್ತು. ಇಂತಹ ಕೋಶಗಳ ರಚನೆಯಲ್ಲಿ ಮೊದಲು ಕೈ ಹಾಕಿದವರು ಬಳ್ಳಾರಿಯ ಈ ಮಿಷನರಿಗಳಾಗಿದ್ದಾರೆ. ವಿಲಿಯಂ ರೀವ್‌ರವರು ೧೮೨೬ ರಲ್ಲಿ ಇಂಗ್ಲಿಷ್‌ಕನ್ನಡ ಶಬ್ದಕೋಶವನ್ನು, ೧೮೩೨ ರಲ್ಲಿ ಕನ್ನಡ ಇಂಗ್ಲಿಷ್ ಶಬ್ದಕೋಶವನ್ನು ರಚಿಸಿದರು. ಇದು ಕನ್ನಡ ಭಾಷೆಯ ಪದಗಳನ್ನು ವಿದೇಶಿ ಭಾಷೆಯ ಪದಗಳೊಂದಿಗೆ ಅರ್ಥೈಸಲು ನಡೆದ ಮೊದಲ ಶಬ್ದಕೋಶ ರಚನಾ ಕಾರ್ಯವಾಗಿದೆ. ವಿಲಿಯಂ ರೀವ್‌ನ ಈ ಕಾರ್ಯ ನಂತರದಲ್ಲಿ ಸ್ಯಾಂಡರ್‌ಸನ್, ಕಿಟೆಲ್‌ರಂಥವರು ಮತ್ತಷ್ಟು ಸುಧಾರಿತ ಶಬ್ದಕೋಶ ರಚಿಸಲು ಪ್ರೇರಕವಾಯಿತು. ಕನ್ನಡ ಸಾಹಿತ್ಯ ಇತಿಹಾಸದಲ್ಲಿ ಬಳ್ಳಾರಿ ಮಿಷನರಿಗಳ ಪಾತ್ರ ಕಾಲದ ದೃಷ್ಟಿಯಲ್ಲಿ ಅಲ್ಪವೆಂದೆನಿಸಿದರೂ ಕಾರ್ಯದ ದೃಷ್ಟಿಯಲ್ಲಿ ಹೊಸಗನ್ನಡದ ಆರಂಭಿಕರಾಗಿ ಈ ಮಿಷನರಿಗಳು ವಹಿಸಿದ ಪಾತ್ರ ಅಮೋಘವಾದದ್ದು. ಹಾಗು ಈ ಮೂಲಕ ಹೊಸಗನ್ನಡ ಸಾಹಿತ್ಯಕ್ಕೆ ಹೊಸ ಬುನಾದಿಯನ್ನು ಒದಗಿಸಿದಂತಾಯಿತು.

### ೪.೫ ಕೈಗಾರಿಕೆ ಮತ್ತು ವೃತ್ತಿ ತರಬೇತಿ

ಕ್ರೈಸ್ತ ಧರ್ಮದ ಪ್ರಸಾರ ಕಾರ್ಯದೊಂದಿಗೆ ಜನರಿಗೆ ಜೀವನೋಪಾಯವನ್ನು ಕಲ್ಪಿಸಿಕೊಡುವುದನ್ನು ಹಾಗೂ ಅವರಿಗಾಗಿ ಕೈಗಾರಿಕಾ ತರಬೇತಿ ಕೇಂದ್ರಗಳನ್ನು ಆರಂಭಿಸಿದವರಲ್ಲಿ ಬಾಸೆಲ್ ಮಿಷನ್ನಿನವರು ಪ್ರಥಮರು. ಮಂಗಳೂರು, ಉತ್ತರ ಕನ್ನಡ, ಧಾರವಾಡ, ಬಿಜಾಪುರ ಜಿಲ್ಲೆಗಳಲ್ಲಿ ಮಡಿಕೆ ತಯಾರಿಸುವ, ಬುಟ್ಟಿ ಹೆಣೆಯುವ, ಹೆಂಚು ಮತ್ತು ಇಟ್ಟಿಗೆ ತಯಾರಿಕೆಯ ಉದ್ಯಮವನ್ನು ತಮ್ಮ ಮಿಷನ್ನಿನ ಅಡಿಯಲ್ಲಿ ಆರಂಭಿಸಿ, ಜನತೆಗೆ ಉದ್ಯೋಗವನ್ನು ಒದಗಿಸಿಕೊಟ್ಟರು. ಆರಂಭದ ಈ ಸೇವೆಯು ಕೆಲವಾರು ಕಾರಣಗಳಿಂದಾಗಿ ಮುಚ್ಚಿಹೋದವು.

ಬಳ್ಳಾರಿಯಲ್ಲಿ ಇಂತಹ ಉದ್ಯಮ ತರಬೇತಿಗಳನ್ನು ಲಂಡನ್ ಮಿಷನ್ನಿನವರು ಆರಂಭಿಸಿರಲಿಲ್ಲ. ಆದರೆ ಕೈಗಾರಿಕೆಯ ಒಂದು ಉಪಭಾಗವಾಗಿ ಇಂದಿನ ಕೆಲವು ಕ್ಯಾಥೊಲಿಕರ ಸಭೆಗಳವರು ವೃತ್ತಿಗಳಲ್ಲಿ ಕೌಶಲ್ಯತೆಯನ್ನು ಮೂಡಿಸುವ ತರಬೇತಿ ಕೇಂದ್ರಗಳನ್ನು ನಿರ್ವಹಿಸುತ್ತಿದ್ದಾರೆ. ಇವು ನಿರ್ದಿಷ್ಟ ಕಾಲಾವಧಿಯಲ್ಲಿ

ಪೂರ್ತಿಗೊಳಿಸಬಹುದಾದ ಮತ್ತು ಬಡವರ್ಗದ ಮಹಿಳೆಯರಿಗೆ ಸುಲಭವಾಗಿ ದಕ್ಕಬಹುದಾದಂತಹ ಕಡಿಮೆ ಖರ್ಚಿನ ತರಬೇತಿಗಳಾಗಿವೆ. ಹೊಲಿಗೆಯಂತ, ಬೆರಳಚ್ಚು, ಶೀಘ್ರಲಿಪಿ, ಕಂಪ್ಯೂಟರ್, ಕಸೂತಿ ಮಾಡುವ, ನೇಯುವ, ತಿಂಡಿತಿನಿಸುಗಳನ್ನು ತಯಾರಿಸುವ, ಗಿಡಮೂಲಿಕೆಯ ಸೌಂದರ್ಯವರ್ಧಕ ಮುಂತಾದ ಮಹಿಳಾ ಕೇಂದ್ರಿತ ತರಬೇತಿಗಳು ಇವಾಗಿವೆ.

**ವೃತ್ತಿ ತರಬೇತಿ ಕೇಂದ್ರಗಳು**

| ಕೇಂದ್ರದ ಹೆಸರು | ತರಬೇತಿ ವಿಷಯಗಳು | ಮುಖ್ಯಸ್ಥರು | ಸ್ಥಳ | ವಿದ್ಯಾರ್ಥಿಗಳು |
|---|---|---|---|---|
| ಅಭ್ಯುದಯ ಕೇಂದ್ರ | ಹೊಲಿಗೆ ಮತ್ತು ಗೃಹಿಣಿ ತರಬೇತಿ | ಸಿಸ್ಟರ್ ಪ್ಯಾಟ್ರಿಕ್ | ಸಂಡೂರು | ೦೮ |
| ಮಹಿಳಾ ವೃತ್ತಿ ತರಬೇತಿ ಕೇಂದ್ರ | ಸೌಂದರ್ಯವರ್ಧನೆ ತಿಂಡಿತಿನಿಸುಗಳ ತಯಾರಿಕೆ ಕಂಪ್ಯೂಟರ್, ಹೊಲಿಗೆ, ವಸ್ತ್ರವಿನ್ಯಾಸ | ಮಿಸ್ ಸುಗಂತ ಸಥಿಯರಾಜ್ | ಬಳ್ಳಾರಿ | ೨೦೦ |
| ಡಾನ್‌ಬಾಸ್ಕೊ ಪ್ರೊಫೆಷನಲ್ ಅಕಾಡೆಮಿ, | ಅನೌಪಚಾರಿಕ ವೃತ್ತಿ ತರಬೇತಿ ಕೇಂದ್ರ | ಫಾ. ರಾಬಿನ್‌ಸನ್ ಪರಪ್ಪಿಲ್ಲೈ | ಹೊಸಪೇಟೆ | ೮೦ |
| | ಕರ್ನಾಟಕ ಸಾಕ್ಷರತಾ ಎಸ್.ಎಸ್.ಎಲ್.ಸಿ. ಮುಕ್ತ ಶಾಲೆ | ರಾಬಿನ್‌ಸನ್ ಪರಪ್ಪಿಲ್ಲೈ | ಹೊಸಪೇಟೆ | ೨೮ |
| | ಸಾಕ್ಷರತಾ ತರಗತಿ | | | ೦೮ |
| | ಕರಿಯರ್ ಎಂಟರ್‌ಟ್ರನೊರಿಯರಲ್ ಡೆವಲಪ್‌ಮೆಂಟ್ | ಫಾ. ಜೋಸೆಫ್ ಡಿ. | ಹೊಸಪೇಟೆ | ೨೦ |
| ಸಹಾಯ ಮಾತೆ ಗೃಹಿಣಿ ತರಬೇತಿ ಕೇಂದ್ರ | ಹೊಲಿಗೆ ಯಂತ್ರ ಮತ್ತು ಗೃಹವಿಜ್ಞಾನ | ಸಿಸ್ಟರ್ ರೊಸರಿಬಾ ಮೆಂಡೇಂಕಾ | ಕಂಪ್ಲಿ | ೨೫ |
| ಸಂತ ಅಂತೋನಿಯವರ ಕೇಂದ್ರ | ಕಂಪ್ಯೂಟರ್ ಹೊಲಿಗೆ ಯಂತ್ರ ನೇಯುವಿಕೆ ಎಂಬ್ರಾಯಡರಿ ಬೆರಳಚ್ಚು ಶೀಘ್ರಲಿಪಿ | ಫಾ. ಎನ್. ಎ. ವಿನ್ಸೆಂಟ್ | ಬಳ್ಳಾರಿ | ೧೭೫ |

### ೪.೬ ವೈದ್ಯಕೀಯ

ಲಂಡನ್ ಮಿಷನ್ನಿನ ಮಿಷನರಿಗಳ ಇತಿಹಾಸದಲ್ಲಿ ವೈದ್ಯಕೀಯ ಅಥವಾ ಆಸ್ಪತ್ರೆಸೇವೆಯು ಬಳ್ಳಾರಿ ಕ್ಷೇತ್ರದಲ್ಲಿ ಮಂಕಾಗಿದೆ ಎಂದೇ ಹೇಳಬಹುದು. ೧೯ ನೇ ಶತಮಾನದ ದ್ವಿತೀಯಾರ್ಧದಲ್ಲಿ ಆಗಮಿಸಿದ ಕ್ಯಾಥೊಲಿಕ್ ಮಿಷನರಿಗಳಿಂದ ಆದಿಯಾಗಿ ವೈದ್ಯಕೀಯ ಸೇವೆಯು ಬಳ್ಳಾರಿಯಲ್ಲಿ ಮೊದಲಿಟ್ಟಿತು. ೧೮೮೫ರ ಹೊತ್ತಿಗೆ ಬಳ್ಳಾರಿ, ಹೊಸಪೇಟೆ, ಕೂಡ್ಲಿಗಿ, ಕಂಪ್ಲಿ ಪಟ್ಟಣಗಳಲ್ಲಿ ನಾಗರೀಕ ಚಿಕಿತ್ಸಾಲಯಗಳನ್ನು ಮದ್ರಾಸ್ ಸರ್ಕಾರ ಸ್ಥಾಪಿಸಿದ್ದಿತು. ಅವುಗಳ ನಿರ್ವಹಣೆಯ ಹೊಣೆ ಸಹ ಮಿಷನರಿಗಳ ಮೇಲಿದ್ದಿತು.

೧೯೪೯ ರಲ್ಲಿ ಬಳ್ಳಾರಿಯು ಧರ್ಮಕ್ಷೇತ್ರವಾಗಿ ಮಾರ್ಪಟಾದ ನಂತರ, ಧರ್ಮಾಧ್ಯಕ್ಷರಾಗಿ ಬಂದ ಫಾ. ಫಾರೆಸ್ಟ್ ಹೋಗನ್, ಫಾ. ಅಂಬ್ರೂಜ್ ಎಡನಪಳ್ಳಿ, ಫಾ. ಜೋಸೆಫ್ ಡಿ. ಸಿಲ್ವಾ ರವರುಗಳು ಬಳ್ಳಾರಿ ಪ್ರದೇಶಕ್ಕೆ ಹಲವಾರು ಸ್ತ್ರೀ ಧಾರ್ಮಿಕ ಸಭೆಗಳಿಗೆ ಸೇರಿದ ಕನ್ಯಾಸಹೋದರಿಯರನ್ನು ಕರೆಯಿಸಿದರು. ಇವರುಗಳಲ್ಲಿ ಗುಡ್‌ಶಫರ್ಡ್ ಕನ್ಯಾಸಹೋದರಿಯರು, ಸಿಸ್ಟರ್ ಆಫ್ ಅವರ್ ಲೇಡಿ ಆಫ್ ಫಾತಿಮಾ, ಸಾಲೇಶಿಯನ್ ಮಿಷನರಿ ಆಫ್ ಮೇರಿ ಇಮ್ಯಾಕುಲೇಟ್, ಅಸ್ಸಿಸಿ ಸಿಸ್ಟರ್ಸ್ ಆಫ್ ಮೇರಿ ಇಮ್ಯಾಕುಲೇಟ್, ಮಿಷನರಿ ಆಫ್ ಚಾರಿಟಿ, ಸಿಸ್ಟರ್ಸ್ ಆಫ್ ಚಾರಿಟಿ, ಸೊಸೈಟಿ ಆಫ್ ಜೀಸಸ್, ಮೇರಿ ಅಂಡ್ ಜೋಸೆಫ್ ಮುಂತಾದವುಗಳು ವೈದ್ಯಕೀಯ ಸೇವೆಗೆ ವಿಶೇಷ ಮೀಸಲಾದ ಸಭೆಗಳಾಗಿವೆ. ಈ ಸಭೆಯ ಕನ್ಯಾಸಹೋದರಿಯರು ನಗರದ ನಿರ್ದಿಷ್ಟ ಪ್ರದೇಶಗಳಲ್ಲಿ ಚಿಕಿತ್ಸೆಯನ್ನು ನೀಡುತ್ತಾರೆ ಮತ್ತು ಸಂಚಾರಿ ಆಸ್ಪತ್ರೆಗಳನ್ನು ಬಳಸಿಕೊಂಡು ನಗರಗಳನ್ನು ಆಶ್ರಯಿಸಿರುವ ಸುತ್ತಲಿನ ಗ್ರಾಮಗಳಲ್ಲಿ ವಾರದ ನಿರ್ದಿಷ್ಟ ದಿನದಂದು ಭೇಟಿ ನೀಡಿ ಚಿಕಿತ್ಸೆ ನೀಡುತ್ತಾರೆ. ಅಲ್ಲದೆ ಇವರು ಬಡ ಜನತೆಗೆ ಚಿಕಿತ್ಸೆಯೊಟ್ಟಿಗೆ ಉಚಿತ ಔಷಧಿಗಳನ್ನು ವಿತರಿಸುತ್ತಾರೆ. ಬಳ್ಳಾರಿ ನಗರದಲ್ಲಿರುವ ಸಂತ ಮೇರಿ ಆಸ್ಪತ್ರೆಯು ಈ ಸಮೂಹದ ಆಸ್ಪತ್ರೆಗಳಲ್ಲಿ ಅತಿ ದೊಡ್ಡದು. ಇಲ್ಲಿ ಸುಮಾರು ಐವತ್ತು ಹಾಸಿಗೆಗಳ ವ್ಯವಸ್ಥೆ ಇದೆ. ಅಲ್ಲದೆ ಪ್ರತಿ ದಿನ ಹೊರರೋಗಿಗಳ ತಪಾಸಣೆಯನ್ನು ಸಹ ನಡೆಸಲಾಗುತ್ತದೆ. ಗರ್ಭಿಣಿಯರ ಮತ್ತು ಕುಷ್ಠರೋಗಿಗಳ ಸೇವೆಯು ಈ ಮಿಷನರಿಗಳ ವೈದ್ಯಕೀಯ ಸೇವೆಯಲ್ಲಿ ಪ್ರಮುಖ ಅಂಗ ಕಾರ್ಯಗಳಾಗಿವೆ. ಒಟ್ಟಾರೆ ಇಂದು ಕ್ರೈಸ್ತ ಮಿಷನರಿಗಳು ಬಳ್ಳಾರಿ ನಗರ, ಹೊಸಪೇಟೆ, ಸಂಡೂರು, ಸಿರುಗುಪ್ಪ, ಕಂಪ್ಲಿ, ಹಗರಿಬೊಮ್ಮನಹಳ್ಳಿಗಳಲ್ಲಿ ಸಲ್ಲಿಸುತ್ತಿರುವ ವಿವಿಧ ತೆರನಾದ ವೈದ್ಯಕೀಯ ಸೇವಾಕೇಂದ್ರಗಳ ವಿವರಣೆ ಇಂತಿದೆ.

**ಆಸ್ಪತ್ರೆಗಳು**

| ಕ್ರ.ಸಂ. | ಆಸ್ಪತ್ರೆಯ ಹೆಸರು | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ಸ್ಥಳ |
|---|---|---|---|---|
| ೧. | ಅಸ್ಸಿಸಿ ಆಸ್ಪತ್ರೆ | ಸಿಸ್ಟರ್ ಡಾಲಿ | ೦೩ | ಹ.ಬೊ.ಹಳ್ಳಿ |
| ೨. | ಸಂತ ಮೇರಿ ಆಸ್ಪತ್ರೆ | ಸಿಸ್ಟರ್ ಮೇರಿ ವರ್ಗೆಸೆ | ೩೦ | ಬಳ್ಳಾರಿ |
| ೩. | ವಿಜಯ ಮೇರಿ ಆಸ್ಪತ್ರೆ | ಸಿಸ್ಟರ್ ಆ್ಯನ್ | ೦೧ | ಸಿರುಗುಪ್ಪ |

**ಔಷಧಾಲಯಗಳು**

| ಕ್ರ.ಸಂ. | ಆಸ್ಪತ್ರೆಯ ಹೆಸರು | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ಸ್ಥಳ |
|---|---|---|---|---|
| ೧. | ಕೃಪಾನಿಲಯ | ಸಿಸ್ಟರ್ ಪ್ಯಾಟ್ರಿಕ್ | ೦೨ | ಸಂಡೂರು |
| ೨. | ಸಹಾಯಮಾತೆ ಔಷಧಾಲಯ | ಸಿಸ್ಟರ್ ಐರೀನ್ ಡಿ ಸೋಜಾ | ೦೧ | ಕಂಪ್ಲಿ |

**ಹೆರಿಗೆ ಆಸ್ಪತ್ರೆಗಳು**

| ಕ್ರ.ಸಂ. | ಆಸ್ಪತ್ರೆಯ ಹೆಸರು | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ಸ್ಥಳ |
|---|---|---|---|---|
| ೧. | ಸಂತ ಮೇರಿ ಆಸ್ಪತ್ರೆ | ಸಿಸ್ಟರ್ ಮೇರಿ ವರ್ಗೆಸೆ | ೧೫ | ಬಳ್ಳಾರಿ |
| ೨. | ವಿಜಯಮೇರಿ ಆಸ್ಪತ್ರೆ | ಸಿಸ್ಟರ್ ಆ್ಯನ್ | ೦೧ | ಸಿರುಗುಪ್ಪ |
| ೩. | ಕೃಪಾನಿಲಯ ಆಸ್ಪತ್ರೆ | ಸಿಸ್ಟರ್ ಪ್ಯಾಟ್ರಿಕ್ | ೦೧ | ಸಂಡೂರು |

**ಸಂಚಾರಿ ಚಿಕಿತ್ಸಾಲಯಗಳು**

೧. ಅಸಿಸ್ಸಿ ಔಷಧಾಲಯ – ಹಗರಿಬೊಮ್ಮನಹಳ್ಳಿ

೨. ಕೃಪಾನಿಲಯ ಔಷಧಾಲಯ – ಸಂಡೂರು

೩. ಸಂತ ಮೇರಿ ಆಸ್ಪತ್ರೆ – ಬಳ್ಳಾರಿ

೪. ವಿಜಯ ಮೇರಿ ಆಸ್ಪತ್ರೆ – ಸಿರುಗುಪ್ಪ

## ಕುಷ್ಠರೋಗ ನಿವಾರಣಾ ಕೇಂದ್ರಗಳು

೧. ಅಸಿಸ್ಸಿ ಕುಷ್ಠರೋಗ ನಿವಾರಣಾ ಕೇಂದ್ರ– ಸಿಸ್ಟರ್ ಡಾಲಿ – ಹಗರಿಬೊಮ್ಮನಹಳ್ಳಿ

೨. ಡಾನ್‌ಬಾಸ್ಕೋ ಕುಷ್ಠರೋಗ ನಿವಾರಣಾ ಕೇಂದ್ರ – ಸಿಸ್ಟರ್ ಸಿಸಿಲಿ ಕರುಕೈಲ್ – ಹೊಸಪೇಟೆ

ಮಿಷನರಿಗಳು ಪುನರ್‌ವಸತಿ ಕೇಂದ್ರಗಳನ್ನು, ಪೋಲಿಯೋ ಪೀಡಿತರಿಗಾಗಿನ ಕೇಂದ್ರಗಳನ್ನು, ವೃದ್ಧಾಶ್ರಮಗಳನ್ನು, ಕಿವುಡ ಮತ್ತು ಮೂಕರಿಗಾಗಿನ ಶಾಲೆಗಳನ್ನು ತೆರೆದು ಅಲ್ಲಿಗೆ ಬರುವಂತಹ ಅನಾಥರಿಗೆ, ಅಂಗವಿಕಲರಿಗೆ, ವೃದ್ಧರಿಗೆ, ನಿರಾಶ್ರಿತರಿಗೆ ತಮ್ಮ ಕೇಂದ್ರಗಳಲ್ಲಿ ಆಶ್ರಯವನ್ನು ನೀಡಿ ಸಲಹುತ್ತಿದ್ದಾರೆ. ಅನಾಥರನ್ನು ಸಲಹುವಂತಹ ಕೇಂದ್ರವು ಮೊಟ್ಟಮೊದಲಿಗೆ ೧೮೧೧ ರಲ್ಲಿ ಜಾನ್ ಹ್ಯಾಂಡ್ಸ್‌ರಿಂದ ಆರಂಭವಾಗಿತ್ತು ಎಂಬುದನ್ನು ಇಲ್ಲಿ ಸ್ಮರಿಸಬಹುದು. ಇವರ ನಂತರ ೧೮೭೩ ರಲ್ಲಿ ಫಾ. ಪ್ಯಾಟ್ರಿಕ್ ದೋಯಲ್‌ರವರು, ೧೮೭೫ ರಲ್ಲಿ ಗುಡ್‌ಶಪರ್ಡ್ ಕನ್ಯಾ ಸಹೋದರಿಯರು ಮತ್ತು ಮಿಷನರೀಸ್ ಆಫ್ ಸಂತ ಫ್ರಾನ್ಸಿಸ್ ಝ್ಯುವಿಯರ್ ಕನ್ಯಾಸಹೋದರಿಯರು ಈ ಸೇವೆಯಲ್ಲಿ ತೊಡಗಿಸಿಕೊಂಡ ಮಿಷನರಿಗಳಾಗಿದ್ದಾರೆ.

ಇಂದು ಬಳ್ಳಾರಿಯಲ್ಲಿ ಇಂತಹ ಸೇವೆ ನೀಡುತ್ತಿರುವ ಮಿಷನರೀಸ್ ಆಫ್ ಚಾರಿಟಿ ಸಭೆಯ ಎರಡು ಕೇಂದ್ರಗಳು ಹಾಗೂ ಸಿಸ್ಟರ್ಸ್ ಆಫ್ ಸಂತ ಜೋಸೆಫ್ ಆಫ್ ಕ್ಲನಿ ಮತ್ತು ಗುಡ್‌ಶಫರ್ಡ್ ಸಭೆಗಳಿಗೆ ಸೇರಿದ ಒಂದೊಂದು ಕೇಂದ್ರಗಳ ವಿವರಣೆ ಈ ಕೆಳಗಿನಿಂತಿದೆ.

| ಕ್ರ.ಸಂ. | ಆಸ್ಪತ್ರೆಯ ಹೆಸರು | ಮುಖ್ಯಸ್ಥರು | ಸಿಬ್ಬಂದಿ ಸಂಖ್ಯೆ | ಆಶ್ರಿತರು | ಸ್ಥಳ |
|---|---|---|---|---|---|
| ೧. | ಶಿಶು ಭವನ ನಿರಾಧಾರಿಗಳ ಗೃಹ | ಸಿಸ್ಟರ್ ಮರಿಯಾ | ೦೪ | ೧೨೦ | ಬಳ್ಳಾರಿ |
| ೨. | ನಿರ್ಮಲ ಹೃದಯ ಭವನ | ಸಿಸ್ಟರ್ ಆ್ಯಂಟೋನಿಲಾ | ೦೬ | ೮೦ | ಬಳ್ಳಾರಿ |
| ೩. | ನವಜೀವನ ರಿಹ್ಯಾಬಿಲೇಶನ್ ಕೇಂದ್ರ | ಸಿಸ್ಟರ್ ಕಾರ್ಮೆಲಾ | ೧೫ | ೫೫ | ಬಳ್ಳಾರಿ |
| ೪. | ಯೂಫ್ರೇಶಿಯಾ ಹೋಂ ಫಾರ್ ದಿ ಏಜ್ಡ್ | ಸಿಸ್ಟರ್ ಚಾರ್‌ಲೋಟ್ | ೦೨ | ೦೮ | ಬಳ್ಳಾರಿ |

ಈ ಮೇಲಿನ ಸಂಸ್ಥೆಗಳ ನಿರ್ವಹಣೆಗೆ ಬೇಕಾದ ಹಣಕಾಸು ನೆರವನ್ನು ವಿದೇಶಿ ದಾನಿಗಳು ಹಾಗೂ ಸಂಸ್ಥೆಗಳು ನೀಡುತ್ತಿವೆ. ಈ ಕೇಂದ್ರಗಳು ದೈಹಿಕ ಮತ್ತು ಮಾನಸಿಕ ಅಸ್ವಸ್ಥರಿಗೆ ಚಿಕಿತ್ಸೆಯೊಟ್ಟಿಗೆ ಅವರುಗಳು ಸಮಾಜದಲ್ಲಿ ಅನ್ಯರೊಂದಿಗೆ ಸಮಾನವಾಗಿ ಜೀವಿಸಲು ಸ್ಪೂರ್ತಿಯನ್ನು ನೀಡುತ್ತಿವೆ.

ಯುವಜನತೆಯನ್ನು ಸಂಘಟಿಸಿ ಅವರಲ್ಲಿ ನಾಯಕತ್ವದ ಗುಣಗಳನ್ನು ಬೆಳೆಸುವಂತಹ ಮತ್ತು ಯುವಜನತೆ ಸ್ವ ಉದ್ಯೋಗ ಕೈಗೊಳ್ಳಲು ಸಹಾಯ ಮಾಡುವ ಹಾಗೂ ಬಾಲ ಕಾರ್ಮಿಕರನ್ನು ಗುರುತಿಸಿ ಅವರಿಗೆ ಕಡ್ಡಾಯ ಶಿಕ್ಷಣದ ಸೌಲಭ್ಯ ಒದಗಿಸುವಂತಹ ಸರ್ಕಾರೇತರ (ಎನ್.ಜಿ.ಓ) ಸಂಘಗಳನ್ನು ಕ್ರೈಸ್ತ ಮಿಷನರಿಗಳು ನಿರ್ವಹಿಸುತ್ತಿದ್ದಾರೆ. ಮಿಷನರಿಗಳ ಈ ಸಮಾಜ ಕಲ್ಯಾಣ ಕಾರ್ಯಗಳಿಗೆ ರಾಷ್ಟ್ರ ಮತ್ತು ಜಿಲ್ಲಾ ಮಟ್ಟದ ಕ್ರೈಸ್ತ ಒಕ್ಕೂಟಗಳು ನೀಡುತ್ತಾ ಬಂದಿವೆ.

ರಾಷ್ಟ್ರಮಟ್ಟದಲ್ಲಿ 'ಚರ್ಚ್‌ಸ್ ಆ್ಯಗ್ಜಲರಿ ಫಾರ್ ಸೋಶಿಯಲ್ ಆ್ಯಕ್ಷನ್(CASA)' ಮತ್ತು 'ಕ್ಯಾಥೋಲಿಕ್ ರಿಲೀಫ್ ಆರ್ಗನೈಜೇಷನ್(CARITAS)'ನಂತಹ ಒಕ್ಕೂಟಗಳು ಅಸ್ತಿತ್ವದಲ್ಲಿವೆ. ಅದೇ ರೀತಿ ಬಳ್ಳಾರಿಯಲ್ಲಿ ಜಿಲ್ಲಾ ಮಟ್ಟದ 'ಡಯಾಸಿನ್ ಡೆವಲಪ್‌ಮೆಂಟ್ ಸೊಸೈಟಿ ಅಂಡ್ ಕ್ಯಾಥೋಲಿಕ್ಸ್ ರಿಲೀಫ್ ಸರ್ವೀಸ್' ಮತ್ತು 'ಡಾನ್ ಬಾಸ್ಕೋ ಸೆಂಟರ್ ಫಾರ್ ಸೋಶಿಯಲ್ ಆ್ಯಕ್ಷನ್' ಎಂಬ ಒಕ್ಕೂಟಗಳು ಬಳ್ಳಾರಿ ನಗರ ಮತ್ತು ಹೊಸಪೇಟೆಗಳ ಮೂಲಕ ಜಿಲ್ಲೆಯಾದ್ಯಂತ ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿವೆ.

**ಅಡಿಟಿಪ್ಪಣಿಗಳು**

೧. ಐನ್ಸ್‌ಲೈ ಟಿ. ಎಂಬ್ರಿ **ದಿ. ಎನ್‌ಸೈಕ್ಲೋಪಿಡಿಯಾ ಆಫ್ ಏಶಿಯನ್ ಹಿಸ್ಟರಿ** ಸಂ ೧, ಕೊಲ್ಲೈರ್ ಮ್ಯಾಕ್‌ಮಿಲನ್ ಪಬ್ಲಿಷರ್ಶ್, ಲಂಡನ್, ೧೯೮೮, ಪು. ೪೩೧

೨. ಆರ್. ಸಿ. ಮಜುಂದಾರ್, **ಬ್ರಿಟಿಷ್ ಪ್ಯಾರಾಮೌಂಟಸಿ ಅಂಡ್ ಇಂಡಿಯನ್ ರಿನೈಜಾನ್ಸ್**, ಭಾಗ ೧, ಭಾರತೀಯ ವಿದ್ಯಾಭವನ್, ೧೯೬೫, ಬಾಂಬೆ, ಪು. ೭೪

೩. ಪ್ರೊ. ಷೇಕ್ ಅಲಿ, **ಕರ್ನಾಟಕ ಚರಿತ್ರೆ, ಸಂ.೦೬**, ಪ್ರಸಾರಾಂಗ, ಕ.ವಿ.ವಿ. ಹಂಪಿ, ೧೯೯೭, ಪು. ೨೩೪

೪. ಅದೇ. ಪುಟ. ೨೩೩

೫. ಪ್ರೊ. ಬರಗೂರು ರಾಮಚಂದ್ರಪ್ಪ, **ಕರ್ನಾಟಕ ಸಂಗಾತಿ**, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೨, ಪು.೭೯೫

೬. ಆರ್. ಸಿ. ಮಜುಂದಾರ್, **ಪೂರ್ವೋಕ್ತ**, ಪುಟ. ೪೧೯

೭. **ಅದೇ.** ಪುಟ. ೪೧೮

೮. ಡಾ. ಪಿ. ಎನ್. ಚೊಪ್ರಾ, **ದಿ ಗ್ಯಾಸೆಟಿಯರ್ ಆಫ್ ಇಂಡಿಯಾ, ಹಿಸ್ಟರಿ ಅಂಡ್ ಕಲ್ಚರ್, ಸಂ.೨**, ಭಾರತ ಸರ್ಕಾರ, ನವದೆಹಲಿ, ೧೯೯೦, ಪು. ೬೫೫

೯. ಅಗ್ರಹಾರ ಕೃಷ್ಣಮೂರ್ತಿ ಸಂ., **ಸಂಸ್ಕೃತ ಕಥನ, ಮೆಕಾಲೆಯ ಮಕ್ಕಳು**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨, ಪು. ೮೦

೧೦. ಐನ್ಸ್‌ಲೈ ಟಿ. ಎಂಬ್ರಿ, **ಪೂರ್ವೋಕ್ತ**, ಪು. ೪೩೧

೧೧. ಡಾ. ಸಿ. ಎನ್. ರಾಮಚಂದ್ರನ್, **ವಸಾಹತೋತ್ತರ ಚಿಂತನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, .೧೦೦೦, ಪು. ೯೦

೧೨. ಪ್ರೊ. ಷೇಕ್ ಅಲಿ, **ಪೂರ್ವೋಕ್ತ**, ಪು. ೨೪೪

೧೩. ಡಾ. ಪಿ. ಎನ್. ಚೊಪ್ರಾ, **ಪೂರ್ವೋಕ್ತ**, ಪು. ೬೫೫

೧೪. ರೆ. ಎನ್. ಸಭಾಪತಿ, **ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ ಬಳ್ಳಾರಿ ಲಂಡನ್ ಮಿಷನ್ನಿನ ಕೊಡುಗೆ**, ಬೆಂಗಳೂರು, ೨೦೦೧, ಪುಟ. ೧೮-೨೮

೧೫. ಫಾ. ಸೆಲ್ವಿಸ್ಟರ್ ಮ್ಯಾಕ್ ಗೋಲ್ಡ್‌ರಿಕ್, **ಬಳ್ಳಾರಿ ಮಿಷನ್**, ಫ್ರಾನ್ಸಿಸ್ಕನ್ ಮಿಷನರಿ ಯೂನಿಯನ್, ಲಂಡನ್, ೧೯೬೦, ಪು. ೨೦೮.

೧೬. ಜಿ. ಎನ್. ರಂಗನಾಥ್ ರಾವ್, **ಪತ್ರಿಕೋದ್ಯಮ**, ಕಾಮಧೇನು ಪಬ್ಲಿಷರ್ಸ್, ಬೆಂಗಳೂರು, ೨೦೦೫, ಪು. ೧೧೨

೧೭. ಸೂರ್ಯನಾಥ್ ಯು. ಕಾಮತ್, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಭಾಗ ೧, ಪರಿಶ್ರೀ ಪ್ರಿಂಟರ್ಸ್, ಬೆಂಗಳೂರು, ೧೯೮೪, ಪು. ೨೮೨

೧೮. ಶ್ರೀನಿವಾಸ್ ಹಾವನೂರು, **ಹೊಸಗನ್ನಡದ ಅರುಣೋದಯ**, ಪ್ರಗತಿ ಪ್ರಿಂಟ್ಸ್ ಕಮ್ಯುನಿಕೇಶನ್ಸ್, ಬೆಂಗಳೂರು, ೨೦೦೦, ಪು.೮

೧೯. ರೆ. ಎನ್. ಸಭಾಪತಿ, **ಪೂರ್ವೋಕ್ತ**, ಪು. ೩೪

೨೦. ಎನ್. ಎಸ್. ಸೀತಾರಾಮಶಾಸ್ತ್ರಿ, **ಕನ್ನಡ ಪತ್ರಿಕೋದ್ಯಮ: ಒಂದು ಪರಿಚಯ**, ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು, ೧೯೯೮, ಪು. ೮೧

೨೧. ಆರ್. ಸಿ. ಮಜುಂದಾರ್, **ಪೂರ್ವೋಕ್ತ**, ಭಾಗ ೨, ಪು. ೨೨೩

೨೨. ಸ್ಟೆಫನ್ ಹೇ, **ಸೋರ್ಸಸ್ ಆಫ್ ಇಂಡಿಯನ್ ಟ್ರೆಡಿಷನ್**, ಸಂಪುಟ ೨, ಕೊಲಂಬಿಯಾ ಯೂನಿವರ್ಸಿಟಿ ಪ್ರೆಸ್, ಕೊಲಂಬಿಯಾ, ೧೯೮೮, ಪು. ೨೯

೨೩. ಆರ್. ಸಿ. ಮಜುಂದಾರ್, **ಪೂರ್ವೋಕ್ತ**, ಪು. ೨೨೮

೨೪. ಈ ದಿನದ ನೆನಪಿಗಾಗಿ ಇಂದಿಗೂ ಜುಲೈ ಒಂದರಂದು ಕರ್ನಾಟಕದಲ್ಲಿ ಪತ್ರಿಕಾ ದಿನಾಚರಣೆಯನ್ನು ಆಚರಿಸಲಾಗುತ್ತಿದೆ.

೨೫. ಶ್ರೀನಿವಾಸ ಹಾವನೂರು, **ಪೂರ್ವೋಕ್ತ**, ಪು.೪೪೭

೨೬. **ಎನ್‌ಸೈಕ್ಲೋಪೀಡಿಯಾ ಆಫ್ ಸೋಶಿಯಲ್ ವರ್ಕ್ ಇನ್ ಇಂಡಿಯಾ**, ಸಂಪುಟ.೨, ಯೂನಿವರ್ಸಿಟಿ ಆಫ್ ವೆಲ್ಫೇರ್, ನ್ಯೂಡೆಲ್ಲಿ, ೧೯೮೭, ಪುಟ.೩೭

೨೭. **ಅದೇ**, ಪುಟ.೩೬

೨೮. **ಅದೇ**, ಪುಟ.೩೭

೨೯. ಆರ್.ಸಿ. ಮಜುಂದಾರ್, **ಪೂರ್ವೋಕ್ತ**, ಪು.೪೧೯

೩೦. ಕೆ.ಎಸ್. ಸಿಂಗ್, **ಪೀಪಲ್ ಆಫ್ ಇಂಡಿಯಾ, ಕರ್ನಾಟಕ**, ಭಾಗ ೩, ಅಫಿಲಿಯೇಟೆಡ್ ಈಸ್ಟ್‌ವೆಸ್ಟ್ ಪ್ರೆಸ್ ಪ್ರೈ.ಲಿ., ನ್ಯೂಡೆಲ್ಲಿ, ೨೦೦೩, ಪು.೧೧೮೦-೧೨೧೭

೩೧. **ಕರ್ನಾಟಕ ರಾಜ್ಯಕೋಶ-೪, ಜನಸಮುದಾಯ ಸಂಪುಟ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೬

೩೨. ಐ.ಮಾ.ಮುತ್ತಣ್ಣ, **ಹತ್ತೊಂಬತ್ತನೆಯ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ**, ಉಷಾಪ್ರೆಸ್, ಮೈಸೂರು, ೧೯೬೯, ಪು. ೧೫೮

೩೩. ಡಾ.ಗಾಡ್ವಿನ್ ಸಿರಿ, **ದಲಿತ ಕ್ರೈಸ್ತರು**, ಕ್ರೈಸ್ತ ಧರ್ಮ ಮತ್ತು ಸಮಾಜ ಅಧ್ಯಯನ ಸಂಸ್ಥೆ, ಬೆಂಗಳೂರು, ೧೯೯೭, ಪು. ೫

೩೪. ಫಾ. ಸೆಲ್ವಿಸ್ಟರ್ ಮ್ಯಾಕ್‌ಗೋಲ್ಡ್ರಿಕ್, **ಪೂರ್ವೋಕ್ತ**, ಪು.೩೦

೩೫. ಶ್ರೀನಿವಾಸ ಹಾವನೂರ, **ಪೂರ್ವೋಕ್ತ**, ಪು. ೮

೩೬. ರಂ. ಶ್ರೀ. ಮುಗಳಿ, **ಕನ್ನಡ ಸಾಹಿತ್ಯ ಚರಿತ್ರೆ**, ಗೀತಾ ಬುಕ್ ಹೌಸ್, ಮೈಸೂರು, ೧೯೫೩, ಪು.೫೦

೩೭. ಎಲ್. ಎಸ್. ಶೇಷಗಿರಿರಾವ್, **ಹೊಸಗನ್ನಡ ಸಾಹಿತ್ಯ ಚರಿತ್ರೆ**, ಅಂಕಿತ ಪುಸ್ತಕ, ಬೆಂಗಳೂರು, ೧೯೯೯, ಪು. ೭

ಬಳ್ಳಾರಿಗೆ ಜಾನ್‌ಹ್ಯಾಂಡ್ಸ್ ಮಿಷನರಿಯ ಆಗಮನದಿಂದಾಗಿಯೇ ಲಂಡನ್ ಮಿಷನ್ ತನ್ನ ಕೇಂದ್ರವನ್ನು ಬಳ್ಳಾರಿಯಲ್ಲಿ ತೆರೆಯುವಂತಾಯಿತು. ಈತನ ಈ ಆಗಮನವನ್ನು ಕರ್ನಾಟಕದಲ್ಲಿ ಪ್ರಥಮ ಪ್ರಾಟೆಸ್ಟೆಂಟ್ ಮಿಷನ್-ಮಿಷನರಿಯ ಪ್ರವೇಶವಾಯಿತು ಎಂಬುದಾಗಿ ಗುರುತಿಸಲಾಗಿದೆ. ಹಾಗೆಯೇ ವಿಲಿಯಂ ರೀವ್, ಜಾನ್ ರೀಡ್‌ರಂತಹ ಮಿಷನರಿಗಳನ್ನು ಲಂಡನ್ ಮಿಷನ್ ನಂತರದಲ್ಲಿ ಬಳ್ಳಾರಿ ಕೇಂದ್ರಕ್ಕೆ ಕಳುಹಿಸಿಕೊಟ್ಟಿತು. ಬಳ್ಳಾರಿಯು ಮದ್ರಾಸ್ ಪ್ರಾಂತ್ಯದ ನಿಯಂತ್ರಣಕ್ಕೆ ಒಳಪಡದಿದ್ದಲ್ಲಿ ಅಥವಾ ಬಳ್ಳಾರಿಯ ಬಿಡುಬಿಸಿಲಿಗೆ ಹೆದರಿ ಹ್ಯಾಂಡ್ಸರೇನಾದರೂ ಹಿಂದಿರುಗಿದ್ದಿದ್ದರೆ ಬಹುಶಃ ಕರ್ನಾಟಕದ ಮಿಷನರಿಗಳ ಕುರಿತಾದ ಚರಿತ್ರೆಯಲ್ಲಿ ಬಳ್ಳಾರಿಗೆ ಸಂಬಂಧಿಸಿದಂತೆ ಹೊಸ ಅಧ್ಯಾಯವೊಂದು ದಾಖಲಾಗುತ್ತಿರಲಿಲ್ಲವೇನೋ. ಹ್ಯಾಂಡ್ಸ್‌ರಿಂದ ಬಳ್ಳಾರಿಯಲ್ಲಿ ಆರಂಭವಾದ ಪ್ರಾಟೆಸ್ಟೆಂಟ್‌ರ ಲಂಡನ್‌ಮಿಷನ್ನಿನ ಧರ್ಮಪ್ರಸಾರ ಕಾರ್ಯಕ್ಕೆ ಸ್ಪರ್ಧಿ ಎಂಬಂತೆ ಬಳ್ಳಾರಿಯಲ್ಲಿ ಬ್ರಿಟಿಷ್ ಸೈನ್ಯದಲ್ಲಿದ್ದ ಕ್ಯಾಥೊಲಿಕ್‌ರ ಅಧ್ಯಾತ್ಮಿಕ ಸೇವೆಯು ೧೮೫೦ ರ ದಶಕದಲ್ಲಿ ಕ್ರಿಯಾಶೀಲವಾಯಿತು. ಲಂಡನ್ ಮಿಷನ್ ತಾನು ಹೊರತಲ್ಲದೆ ಮತ್ತೊಂದು ಪ್ರಾಟೆಸ್ಟೆಂಟ್ ಮಿಷನ್ ಬಳ್ಳಾರಿಗೆ ಬರದಂತೆ ಎಲ್ಲಾ ರೀತಿಯ ಕಾರ್ಯ ಚಟುವಟಿಕೆಗಳಲ್ಲಿಯೂ ತನ್ನ ಮಿಷನರಿಗಳ ಮೂಲಕ ತೊಡಗಿಸಿಕೊಂಡಿದ್ದಿತು. ಆದರೂ ಬಾಸೆಲ್ ಮಿಷನರಿಯಾದ ಹರ್ಮನ್ ಮೋಗ್ಲಿಂಗ್‌ರ ಪ್ರಯತ್ನದಿಂದಾಗಿ ಬಳ್ಳಾರಿಯ ಲಂಡನ್ ಮಿಷನ್ ಪ್ರೆಸ್‌ನಲ್ಲಿ ಕನ್ನಡದ ಎರಡನೇ ಪತ್ರಿಕೆಯು ಪ್ರಕಟವಾಯಿತು. ಮಿಷನರಿಗಳ ಕುರಿತಾದ ಆರಂಭದ ಸಂಶೋಧನೆಗಳಲ್ಲಿ ಕನ್ನಡದ ಪ್ರಥಮ ಪತ್ರಿಕೆಯನ್ನು ೧೮೧೨ ರಲ್ಲಿ ಬಳ್ಳಾರಿಯಲ್ಲಿ ಆರಂಭಿಸಲಾಗಿತ್ತು ಎಂದು ತಿಳಿಸಲಾಗಿದ್ದಿತು. ಈ ತಪ್ಪು ವಿವರಣೆಗಳನ್ನು ಸರಿಪಡಿಸಿರುವ ಹೊಸ ಸಂಶೋಧನೆಗಳನ್ನು ಆಧರಿಸಿ ಈ ಪ್ರಬಂಧದಲ್ಲಿ ವಿವರಿಸಲಾಗಿದೆ.

ಲಂಡನ್ ಮಿಷನ್ ಬಳ್ಳಾರಿಯ ಮೂಲಕ ಬೆಳಗಾಂ, ಧಾರವಾಡ, ಮುದಗಲ್‌ಗಳಿಗೆ ತನ್ನ ಕಾರ್ಯಗಳನ್ನು ವಿಸ್ತರಿಸಿತು. ಆದರೆ ಅದಕ್ಕೆ ಪ್ರತಿಯಾಗಿ ಆ ಭಾಗದಲ್ಲಿ ಬಾಸೆಲ್ ಮಿಷನ್ ಸ್ಥಳೀಯರ ಬೆಂಬಲವನ್ನು ಹೆಚ್ಚಾಗಿ ಪಡೆಯಿತು. ಅಲ್ಲದೆ ಇದೇ ಅವಧಿಯ ಮೈಸೂರಿನಲ್ಲಿ ಕಮಿಷನ್ನರುಗಳ ಆಳ್ವಿಕೆ (೧೮೩೧-೮೧) ಆರಂಭವಾಗಿದ್ದು ಅವರು ಶಿಕ್ಷಣ ಮತ್ತು ಇನ್ನಿತರ ಕಾರ್ಯಗಳ ನಿರ್ವಹಣೆಗೆ ಮಿಷನರಿಗಳನ್ನು ಆಹ್ವಾನಿಸಿದರು. ಮತ್ತು ಲಂಡನ್ ಮಿಷನ್ ಬಳ್ಳಾರಿ ಜನತೆಗೆ ಜೀವನಾಧಾರವನ್ನು ರೂಪಿಸಿಕೊಡುವಲ್ಲಿ ವಿಫಲರಾದರು. ಮೇಲಿನ ಈ ಎಲ್ಲಾ ಕಾರಣಗಳಿಂದಾಗಿ ಲಂಡನ್ ಮಿಷನ್ ಬಳ್ಳಾರಿಗರ ಪ್ರೋತ್ಸಾಹದ ಕೊರತೆಯನ್ನು ಎದುರಿಸಬೇಕಾಯಿತು. ಹಾಗಾಗಿ ೧೮೬೦ ರ ಹೊತ್ತಿಗೆ ತನ್ನ ಆಸಕ್ತಿಯನ್ನು ಬೆಂಗಳೂರು, ಮೈಸೂರಿನೆಡೆಗೆ ಕೇಂದ್ರೀಕರಿಸಿತು. ಆದಾಗ್ಯೂ ೧೫೦ ವರ್ಷಗಳ ನಂತರವೂ ಲಂಡನ್ ಮಿಷನ್‌ನ ಮಿಷನರಿಗಳು ನಿರ್ಮಿಸಿದಂತಹ ಚರ್ಚ್ ಕಟ್ಟಡಗಳನ್ನು, ಮತ್ತು ಶಿಕ್ಷಣ ನೀಡುತ್ತಿರುವ ಕಟ್ಟಡಗಳಾದ ವಾರ್ಡ್‌ಲಾ ಶಾಲೆ (೧೮೪೬) ಸಂತ ಫಿಲೋಮಿನಾ ಶಾಲೆ (೧೮೮೫) ಸಂತ ಜಾನರ ಶಾಲೆ (೧೯೦೪) ಸಂತ ಜೋಸೆಫರ ಶಾಲೆ (೧೯೦೬) ಮುಂತಾದ ಆಧುನಿಕ ಇತಿಹಾಸದ ಬಹುಮುಖ್ಯ ಆಕರಗಳಾಗಿರುವ ಸ್ಮಾರಕಗಳ ಕುರಿತು ವಿವರವಾಗಿ ಚರ್ಚಿಸಲಾಗಿದೆ. ಇವುಗಳು ಕೇವಲ ಸ್ಮಾರಕಗಳಾಗಿಯೇ ಉಳಿಯದೆ ಇಂದಿಗೂ ಸುಸ್ಥಿತಿಯಲ್ಲಿದ್ದು ಸೇವೆ ನೀಡುತ್ತಿರುವ ಕೇಂದ್ರಗಳಾಗಿಯೂ ಕಾಣಬಹುದಾಗಿದೆ.

ಕನ್ನಡ ಸಾಹಿತ್ಯವು ಹೊಸ ರೂಪವನ್ನು ಪಡೆಯುವಲ್ಲಿ ಮೊದಲಿಗರಾಗಿ ಕಂಡು ಬರುವವರು ಬಳ್ಳಾರಿಯಲ್ಲಿ ಸೇವೆ ಸಲ್ಲಿಸಿದ ಆದ್ಯ ಮಿಷನರಿಗಳಾಗಿದ್ದಾರೆ. ಇವರು ರಚಿಸಿದ ಗದ್ಯರೂಪದ ಸಾಹಿತ್ಯ (೧೮೧೨)ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಆದ್ಯ ಘನಕಾರ್ಯವಾಗಿದೆ. ಈ ಬಗ್ಗೆ ಉಪ ಅಧ್ಯಾಯವೊಂದರಲ್ಲಿ ವಿವರಿಸಲಾಗಿದೆ.

ಮಿಷನರಿಗಳ ಧರ್ಮ-ಪ್ರಸಾರ ಕಾರ್ಯದಿಂದ ಬಳ್ಳಾರಿ ಜನತೆಯಲ್ಲಿ ಚಿಂತನಾ ಗುಣ ಬೆಳೆಯಿತು. ಮಿಷನರಿಗಳ ಒಡನಾಟದಿಂದಾಗಿ ಸ್ವಚ್ಛತೆ, ಶಾಂತತೆ ಮತ್ತು ಶಿಸ್ತಿನ ಬಗ್ಗೆ ಹೆಚ್ಚಿನ ಅರಿವು ಮೂಡಿತು. ಮಿಷನರಿಗಳಿಗೆ ಅಭಾರಿಗಳಾಗಿ ಉಳಿದಿದ್ದ ಕೆಳವರ್ಗದವರು ಮತಾಂತರಗೊಂಡು ಕ್ರೈಸ್ತ ಧರ್ಮದ ವಿಧಿಗಳನ್ನು ಆಚರಿಸತೊಡಗಿದರು. ಸಾಮಾಜಿಕ ಸ್ಥಾನದಲ್ಲಿ ಬದಲಾವಣೆ ಬಯಸಿ ಮತಾಂತರಗೊಂಡರಾದರೂ ತಮ್ಮ ನಿರೀಕ್ಷೆ ಹುಸಿಯಾದಾಗ ಜಾತಿಪದ್ಧತಿಯನ್ನು ಆಚರಿಸುವ ಮೇಲ್ವರ್ಗದವರನ್ನು ಪ್ರಶ್ನಿಸುವ ಮತ್ತು ಅವರ ವಿರುದ್ಧ ಪ್ರತಿಭಟಿಸುವ ಮನೋಭಾವ ಬೆಳೆಯಿತು. ಇಂದು ಬಳ್ಳಾರಿಯಲ್ಲಿರುವ ಪ್ರಾಟೆಸ್ಟೆಂಟ್ ಕ್ರೈಸ್ತರಲ್ಲಿ ಅತಿ ಹೆಚ್ಚಿನವರು ಕೆಳವರ್ಗಕ್ಕೆ ಸೇರಿದವರಾಗಿದ್ದಾರೆ. ಇವರು ಮತಾಂತರದ ನಂತರವೂ ವಿವಾಹ, ಚುನಾವಣಾ ನಿರ್ಧಾರ, ಸರ್ಕಾರಿ ಸೌಲಭ್ಯಗಳನ್ನು ಪಡೆಯುವ ಸಂದರ್ಭದಲ್ಲಿ ಮೂಲಜಾತಿಯಿಂದ ಗುರುತಿಸಿಕೊಳ್ಳಲು ಇಚ್ಛಿಸುತ್ತಿದ್ದಾರೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಬಳ್ಳಾರಿಯಲ್ಲಿ ಇತ್ತೀಚಿನ ದಿನಗಳಲ್ಲಿ ಕಂಡುಬರುತ್ತಿರುವ ದಲಿತರು ಮತ್ತು ದಲಿತೇತರರ ಮಧ್ಯದ ಸಂಘರ್ಷಕ್ಕೆ ಅಂದು ಮಿಷನರಿಗಳು ದಲಿತರಿಗೆ ನೀಡಿದ ಸಂಸ್ಕೃತಿ ಹೊರಗಿನ ಜಾಗೃತಿಯಿಂದಾಗಿ ಎನ್ನಬಹುದು.

ಬಳ್ಳಾರಿಯು ಆದಿಯಿಂದ ಇಂದಿನವರೆಗೆ ಚರಿತ್ರೆಯಲ್ಲಿ ವಹಿಸಿರುವ ಮುಖ್ಯಪಾತ್ರವನ್ನು ವಿವರಿಸಲಾಗಿದೆ. ಅಲ್ಲದೆ ಈ ಚರಿತ್ರೆಯಲ್ಲಿ ವಿಜಯನಗರ ಕಾಲಕ್ಕೆ ಮತ್ತು ವಸಾಹತು ಕಾಲಕ್ಕೆ ವಿಶೇಷ ಒತ್ತು ಕೊಟ್ಟು ಅಧ್ಯಯನ ನಡೆಸಲಾಗಿದೆ. ಈ ಕಾಲಘಟ್ಟಗಳಲ್ಲಿ ಮಿಷನರಿಗಳ ಪ್ರವೇಶ ಮತ್ತು ಅವರ ಕಾರ್ಯಗಳನ್ನು ಗುರುತಿಸಲಾಗಿದೆ. ಮಿಷನರಿಗಳ ಚಾರಿತ್ರಿಕ ಹಿನ್ನೆಲೆಯಲ್ಲಿ ಮಿಷನರಿಗಳ ಉಗಮದೊಂದಿಗೆ, ಮಿಷನರಿ ಪದದ ನಿಷ್ಪತ್ತಿ, ಅರ್ಥ ಮತ್ತು ವಾಖ್ಯೆಗಳನ್ನು ನೀಡಲು ಪ್ರಯತ್ನಿಸಲಾಗಿದೆ. ಮತ್ತು ಅವರ ಆಗಮನದ ಉದ್ದೇಶಗಳನ್ನು, ಕಾರ್ಯ, ಸ್ವರೂಪಗಳನ್ನು ಅರ್ಥೈಸಲಾಗಿದೆ. ಜೊತೆಗೆ ಮಿಷನರಿಗಳು ದಕ್ಷಿಣಭಾರತವನ್ನು ಪ್ರವೇಶಿಸಿದ ನಂತರ ಅವರುಗಳು ನೆಲೆನಿಂತ ಪ್ರದೇಶಗಳನ್ನು ಕಾಲಸಹಿತ ಉಲ್ಲೇಖಿಸಲಾಗಿದೆ. ಕರ್ನಾಟಕ ಮತ್ತು ಅದರೊಳಗಿನ ಬಳ್ಳಾರಿಯಲ್ಲಿ ಮಿಷನರಿಗಳು ನೆಲೆ ನಿಲ್ಲಲು ಕಾರಣವಾದ ಅಂಶಗಳನ್ನು ತಿಳಿಸಲಾಗಿದೆ. ಮದ್ರಾಸ್ ಕೇಂದ್ರದಿಂದ ಪ್ರಾಟೆಸ್ಟೆಂಟ್ ಮಿಷನ್‌ಗಳು ತಮ್ಮ ಮಿಷನರಿಗಳನ್ನು ನಾಡಿನ ಅನ್ಯಭಾಗಗಳಿಗೆ ಕಳುಹಿಸಿತು. ಅದೇ ರೀತಿ ಕ್ಯಾಥೋಲಿಕ್ ಮಿಷನ್‌ಗಳು ಗೋವಾ ಮತ್ತು ಕರ್ನಾಟಕ ಕೇಂದ್ರಗಳ ಮೂಲಕ ಅನ್ಯಕೇಂದ್ರಗಳಿಗೆ ತನ್ನ ಮಿಷನರಿಗಳನ್ನು ಕಳುಹಿಸಿತು. ಹಾಗಾಗಿ ಮದ್ರಾಸಿನಲ್ಲಿ ಕಾರ್ಯನಿರ್ವಹಿಸಿದ ಪ್ರಾಟೆಸ್ಟೆಂಟ್ ಮಿಷನ್‌ಗಳ ಪಟ್ಟಿಯನ್ನು ಮತ್ತು ಕರ್ನಾಟಕದಲ್ಲಿ ಕಾರ್ಯನಿರ್ವಹಿಸಿದ ಮಿಷನ್‌ಗಳ ಪಟ್ಟಿಯನ್ನು, ಕಾಲವನ್ನು ಕ್ರಮವಾಗಿ ಹೊಂದಿಸಿ ನೀಡಲಾಗಿದೆ.

ಬಳ್ಳಾರಿಯಲ್ಲಿ ಸೇವೆ ಸಲ್ಲಿಸಿದ ಮಿಷನರಿಗಳನ್ನು ಅವರುಗಳ ಮಿಷನ್‌ಗಳ ಜೊತೆಗೆ ವಿವರಿಸಲು ಯತ್ನಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಪ್ರಾಟೆಸ್ಟೆಂಟ್ ಪಂಥ, ಕ್ಯಾಥೊಲಿಕ್ ಪಂಥದ ಮಿಷನ್‌ಗಳನ್ನು ಪ್ರತ್ಯೇಕವಾಗಿ ವಿಂಗಡಿಸಿಕೊಳ್ಳಲಾಗಿದೆ. ಪ್ರಾಟೆಸ್ಟೆಂಟ್ ಮಿಷನರಿಗಳು ಬಳ್ಳಾರಿಗೆ ಆಗಮಿಸಿದವರಲ್ಲಿ ಮೊದಲಿಗರಾಗಿದ್ದರಿಂದ ಪ್ರಾಟೆಸ್ಟೆಂಟರಿಗೆ ಮೊದಲ ಆದ್ಯತೆಯನ್ನು ಅಧ್ಯಯನದಲ್ಲಿ ನೀಡಲಾಗಿದೆ. ೧೮೧೦ ರಿಂದ ಆದಿಯಾಗಿ ಬಂದು ಹೋದ ಮಿಷನರಿಗಳನ್ನು ಕಾಲಾನುಕ್ರಮವಾಗಿ ವಿಂಗಡಿಸಿ ಅವರ ಸಾಧನೆಗಳಿಗೆ ಒತ್ತು ಕೊಟ್ಟು ವಿವರಣೆ ನೀಡಲೆತ್ನಿಸಲಾಗಿದೆ.

ಮಿಷನರಿಗಳು ಬಳ್ಳಾರಿಯ ವ್ಯಾಪ್ತಿಯಲ್ಲಿ ಕೈಗೊಂಡಿದ್ದ ಕಾರ್ಯಚಟುವಟಿಕೆಗಳಾದ ಶಿಕ್ಷಣ, ಮುದ್ರಣ, ಪತ್ರಿಕೋದ್ಯಮ, ಮತಾಂತರ, ಕೈಗಾರಿಕೆ, ವೈದ್ಯಕೀಯ ಮತ್ತು ಸಾಹಿತ್ಯ ಕಾರ್ಯಗಳನ್ನು ಒಂದೊಂದಾಗಿ ವಿಸ್ತೃತವಾಗಿ

ವಿವರಿಸಲಾಗಿದೆ. ಮತ್ತು ಅವುಗಳ ಬಗ್ಗೆ ಮಿಷನರಿಗಳ ಕೊಡುಗೆಗಳನ್ನು ಸಂಗ್ರಹಿಸಿ ವಿಶದಪಡಿಸಲಾಗಿದೆ. ಉಳಿದಂತೆ ಕೈಗಾರಿಕಾ ಕಾರ್ಯಗಳು ಬಳ್ಳಾರಿ ಪ್ರದೇಶದಲ್ಲಿ ಮಿಷನರಿಗಳಿಂದ ಕೈಗೂಡಿಲ್ಲ, ಕೈಗಾರಿಕಾ ಉಪಶೀರ್ಷಿಕೆಯಡಿಯಲ್ಲಿ ಇಂದು ಮಿಷನರಿಗಳು ನೀಡುತ್ತಿರುವ ವೃತ್ತಿತರಬೇತಿಗಳನ್ನು ಅವರುಗಳ ಕೇಂದ್ರಗಳ ಪಟ್ಟಿ ಸಹಿತ ಮಾಹಿತಿ ಒದಗಿಸಲಾಗಿದೆ.

ಒಟ್ಟಾರೆ ಹತ್ತೊಂಬತ್ತನೆಯ ಶತಮಾನ ಬಳ್ಳಾರಿ ಚರಿತ್ರೆಯಲ್ಲಿ ತುಂಬಾ ವಿಶಿಷ್ಟವಾದ ಅವಧಿ. ಈ ಕಾಲದಲ್ಲಿಯೇ ಮಿಷನರಿಗಳಿಂದಾಗಿ ಹೊರಗಿನ ಆಚಾರ ಪದ್ಧತಿ, ಪರಂಪರೆಗಳು, ನವೀನ ವಿಚಾರಧಾರೆಗಳು ಬಳ್ಳಾರಿಗರಿಗೆ ಪರಿಚಯಿತವಾದವು. ಕ್ರಾಂತಿಕಾರಕವೆಂದು ತೋರುತ್ತಿದ್ದ ಮತಾಂತರ ಕಾರ್ಯಗಳು ಬಳ್ಳಾರಿ ಜನಜೀವನವನ್ನು ತುಂಬಿಕೊಂಡವು. ಹಿಂದಿನ ಸಹಸ್ರಾರು ವರ್ಷಗಳ ಚರಿತ್ರೆಯಲ್ಲಿ ಕಂಡುಬರದ ಕ್ರಿಯೆ ಪ್ರತಿಕ್ರಿಯೆಗಳು ಈ ಕಾಲದಲ್ಲಿ ಕಾಣಿಸಿಕೊಂಡವು. ದಲಿತರು ಆವರೆಗಿನ ಪಾರಂಪರಿಕ ನಂಬಿಕೆ ಮತ್ತು ನಡವಳಿಕೆಗಳನ್ನು ಪ್ರಶ್ನಿಸುವ ಧೈರ್ಯತೋರಿದರು. ವರ್ಣ, ಜಾತಿವ್ಯವಸ್ಥೆಯಡಿಯಲ್ಲಿ ವಿರೂಪಗೊಂಡ, ಸಂಕುಚಿತಗೊಂಡ ಭಾರತೀಯ ಸಮಾಜವು ಸ್ಥಿತ್ಯಂತರಗೊಳ್ಳುವ ನಿಟ್ಟಿನಲ್ಲಿ ಕ್ರೈಸ್ತ ಮಿಷನರಿಗಳ ಹೊಸ ವಿಚಾರ, ನಂಬಿಕೆಗಳು, ಧರ್ಮ, ವೈಜ್ಞಾನಿಕತೆ, ವೈಚಾರಿಕತೆ ಕುರಿತಂತೆ ಜನರಲ್ಲಿ ಮೂಡಿಸಿದ ಹೊಸ ಪ್ರಜ್ಞೆಯು ಇಡೀ ದೇಶದಲ್ಲಿ ಹೊಸ ಅಲೆ, ಹೊಸ ಚೇತನಕ್ಕೆ ಕಾರಣವಾಯಿತು. ಇದರ ಪ್ರಭಾವದಿಂದ ಬಳ್ಳಾರಿಯೂ ಹೊರತಾಗಿರಲಿಲ್ಲ.

ಕ್ರೈಸ್ತ ಮಿಷನರಿಗಳು ಈ ಪ್ರದೇಶದ ಸಾಮಾಜಿಕ ಅಥವಾ ಆರ್ಥಿಕ ಪ್ರಗತಿಯ ಉದ್ದೇಶವನ್ನು ಇಟ್ಟುಕೊಂಡು ಇಲ್ಲಿಗೆ ಪ್ರವೇಶ ಪಡೆದಿರಲಿಲ್ಲ. ಆದರೆ ಅವರ ಶಿಕ್ಷಣ, ವೈದ್ಯಕೀಯ, ಮುದ್ರಣ, ಕೈಗಾರಿಕೆ, ಸಾಹಿತ್ಯ ಮುಂತಾದ ಕ್ಷೇತ್ರಗಳಲ್ಲಿನ ಕೆಲಸ ಕಾರ್ಯಗಳ ಲಾಭವನ್ನು ಈ ಪ್ರದೇಶ ಮತ್ತು ಜನತೆ ಪಡೆದುಕೊಂಡಿತು ಎನ್ನುವುದರಲ್ಲಿ ಎರಡು ಮಾತಿಲ್ಲ. ಕ್ರೈಸ್ತ ಮಿಷನರಿಗಳು ಈ ಪ್ರದೇಶದ ಜನರ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳನ್ನೇ ಬಂಡವಾಳವನ್ನಾಗಿಸಿಕೊಂಡು ತಮ್ಮ ಕೆಲಸ ಕಾರ್ಯಗಳಲ್ಲಿ ಯಶಸ್ಸನ್ನು ಕಂಡರು. ಇದು ಮಿಷನರಿಗಳಿಗೆ ತಮ್ಮ ಅಸ್ತಿತ್ವದ ದೃಷ್ಟಿಯಿಂದ ಅನಿವಾರ್ಯವೂ ಆಗಿತ್ತು. ಮಿಷನರಿಗಳು ಮೂಡಿಸಿದ ಹೊಸ ಪ್ರಜ್ಞೆಯ ಹಿಂದಿನ ಧೋರಣೆಗಳು ಏನೇ ಇದ್ದರೂ, ಅದು ಈ ಪ್ರದೇಶದ ಜನರ ಅಭಿವೃದ್ಧಿಗೆ ಎಷ್ಟರ ಮಟ್ಟಿಗೆ ಪೂರಕವಾಯಿತು ಎನ್ನುವ ವಿಚಾರಕ್ಕೆ ಈ ಅಧ್ಯಯನದಲ್ಲಿ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ಬಳ್ಳಾರಿಯು ಇವತ್ತಿಗೂ ಶಿಕ್ಷಣ ವೈದ್ಯಕೀಯ ಮುಂತಾದ ಕ್ಷೇತ್ರಗಳಲ್ಲಿ ಕ್ರೈಸ್ತ ಮಿಷನರಿಗಳ ಪ್ರಭಾವ ವಲಯದಲ್ಲಿಯೇ ಇರುವುದು ಮೇಲ್ನೋಟಕ್ಕೆ ತಿಳಿದು ಬರುತ್ತದೆ. ಇದನ್ನು ಸರಿ ಅಥವಾ ತಪ್ಪು ಎಂದು ವ್ಯಾಖ್ಯಾನಿಸುವ ಬದಲು, ಪ್ರದೇಶದ ಅಭಿವೃದ್ಧಿಯ ಹಿನ್ನೆಲೆಯಿಂದ ವ್ಯಾಖ್ಯಾನಿಸಬೇಕಾಗುತ್ತದೆ. ಒಟ್ಟಾರೆಯಾಗಿ ಈ ಅಧ್ಯಯನದ ಫಲಿತಗಳನ್ನು ಈ ಹಿನ್ನೆಲೆಯಿಂದಲೇ ಕಂಡುಕೊಳ್ಳಲಾಗಿದೆ.

# ಆಕರ ಗ್ರಂಥಗಳು


೧. ಅಗ್ರಹಾರ ಕೃಷ್ಣಮೂರ್ತಿ ಸಂ., **ಸಂಸ್ಕೃತಿ ಕಥನ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

೨. ಅನಂತ ರಾಮರಾವ್ ಕೆ., ಪ್ರಧಾನ ಸಂಪಾದಕರು, **ಸುವರ್ಣಕರ್ನಾಟಕ ದರ್ಶನ**, ವಿದ್ಯಾಪಬ್ಲಿಷಿಂಗ್ ಹೌಸ್, ಮಂಗಳೂರು, ೨೦೦೬

೩. ಅಂಗಡಿಎಸ್. ಎಸ್. , **ಮಿಷನರಿಗಳ ದ್ವಿಭಾಷಿಕ ನಿಘಂಟುಗಳು ತೌಲನಿಕ ಅಧ್ಯಯನ**, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಉಷಾ ರಾಣಿ ಎಲ್. ಪಿ., **ಡಾ. ಹರ್ಮನ್ ಮೋಗ್ಲಿಂಗ್ ಸಂಕಲಿಸಿದ ದಾಸರ ಪದಗಳು ಒಂದು ಅಧ್ಯಯನ**, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೫. ಎಡ್ವರ್ಡ್ ನೋರೋ, **ಕನ್ನಡ ಧಾರ್ಮಿಕ ಸಾಹಿತ್ಯಕ್ಕೆ ಕ್ರೈಸ್ತ ಮಿಷನರಿಗಳ ಕೊಡುಗೆ**, ಭಾಗ್ಯವಾನ್ ಪ್ರಕಾಶನ, ಮೈಸೂರು, ೧೯೯೬.

೬. ಸ್ವಾಮಿ ಐ. ಅಂತಪ್ಪ, **ಶ್ರೀರಂಗಪಟ್ಟಣದಲ್ಲಿ ಮತ್ತು ಸುತ್ತಮುತ್ತಲಿನ ಕ್ರೈಸ್ತ ಧರ್ಮದ ಉಗಮ**, ಕ್ಯಾಥೊಲಿಕ್ ಕ್ರೈಸ್ತರ ಕನ್ನಡ ಸಾಹಿತ್ಯ ಸಂಘ, ಬೆಂಗಳೂರು, ೧೯೯೪

೭. ಕಾಮತ್ ಯು. ಸೂರ್ಯನಾಥ್, **ಕರ್ನಾಟಕದ ಸಂಕ್ಷಿಪ್ತ ಇತಿಹಾಸ**, ಬೆಂಗಳೂರು, ೧೯೭೩

೮. ಕುಂಬಾಸ, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ**, ಶ್ರೀ ಮಾಲತೇಶ ಪ್ರಕಾಶನ, ಹರಪನಹಳ್ಳಿ, ೧೯೯೦

೯. ಗಾಡ್ವಿನ್ ಸಿರಿ, **ದಲಿತ ಕ್ರೈಸ್ತರು**, ಕ್ರೈಸ್ತ ಧರ್ಮ ಮತ್ತು ಸಮಾಜ ಅಧ್ಯಯನ ಸಂಸ್ಥೆ, ಬೆಂಗಳೂರು, ೧೯೯೭.

೧೦. ಜಗನ್ನಾಥ್ ಹೆಬ್ಬಾಳೆ, **ಬಸವ ಪ್ರಭೆ**, ಸ್ವಾಗತ ಸಮಿತಿ, ೭೨, ಅ.ಭಾ.ಕ.ಸಾ. ಸಮ್ಮೇಳನ, ಬೀದರ್, ೨೦೦೬

೧೧. ಜಯವಂತ ಎಂ. ಜೋಗುಳ, **ಮಿಷನರಿ ಚಳುವಳಿ**, ಬೆಂಗಳೂರು, ೧೯೮೬

೧೨. ತಲ್ವಾಡಿ ಬಿ. ಎಸ್., **ಕರ್ನಾಟಕದಲ್ಲಿ ಕ್ರೈಸ್ತರು**, ಕರ್ನಾಟಕ ಕ್ರೈಸ್ತ ಜಾನಪದ ಕೇಂದ್ರ, ಬೆಂಗಳೂರು, ೧೯೯೮

೧೩. ತಿಪ್ಪೇರುದ್ರಸ್ವಾಮಿ. ಹೆಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಮೈಸೂರು, ೧೯೭೪

೧೪. ತಂಬಂಡ ವಿಜಯ ಪೂಣಚ್ಚ, **ಚರಿತ್ರೆ ವಿಶ್ವಕೋಶ ೪**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೫. ದಯಾನಂದ ಪ್ರಭು, **ಮೈಸೂರು ಸಂಸ್ಥಾನದ ಕ್ರೈಸ್ತರ ಇತಿಹಾಸ**, ಶ್ವೇತ ಪ್ರಕಾಶನ, ಸೋಮವಾರ ಪೇಟೆ, ೧೯೯೪

೧೬. ನಾಗಯ್ಯ ಜೆ. ಎಂ., **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೨

೧೭. ನಾರಾಯಣ ಶಾಸ್ತ್ರಿ, **ಭಾರತದ ಸರ್ವಧರ್ಮ ಸಾಧು ಸಂತರು**, ಸಮಾಜ ಪುಸ್ತಕಾಲಯ, ಧಾರವಾಡ, ೧೯೯೮

೧೮. ಪಾಟೀಲ ಹೆಚ್. ಎಸ್., **ತಿರುಳ್ಗನ್ನಡ**, ಸ್ವಾಗತ ಸಮಿತಿ, ಕನ್ನಡ ಸಾಹಿತ್ಯ ಸಮ್ಮೇಳನ, ಕೊಪ್ಪಳ, ೧೯೯೩

೧೯. ಫಿಯಸ್ ಫಿಡೆಲಿಸ್ ಪಿಂಟೋ, **ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ**, ಸಮನ್ವಯ ಪ್ರಕಾಶನ, ಮಂಗಳೂರು, ೧೯೯೯

೨೦. ಬರಗೂರು ರಾಮಚಂದ್ರಪ್ಪ, **ಕರ್ನಾಟಕ ಸಂಗಾತಿ**, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೨

೨೧. ಬಸಪ್ಪ ಕೆ., **ಕೌಲ್‌ಬಜಾರಿನ ಸಾಂಸ್ಕೃತಿಕ ಅಧ್ಯಯನ**, ಪಿಎಚ್. ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨೨. ಮ್ಯಾಥ್ಯೂ ಕೆ. ಎ., **ಕರ್ನಾಟಕ ಧರ್ಮಸಭೆ**, ರೇಗೊ ಅಂಡ್ ಸನ್ಸ್, ಬೆಂಗಳೂರು, ೨೦೦೦

೨೩. ಮುಗುಳಿ ರಂ. ಶ್ರೀ. , **ಕನ್ನಡ ಸಾಹಿತ್ಯ ಚರಿತ್ರೆ**, ಗೀತಾ ಬುಕ್ ಹೌಸ್, ಮೈಸೂರು, ೨೦೦೫

೨೪. ಮುತ್ತಣ್ಣ ಐ. ಮಾ., **೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ**, ಉಷಾ ಪ್ರೆಸ್, ಮೈಸೂರು, ೧೯೮೭

೨೫. ಮುತ್ತಣ್ಣ ಐ. ಮಾ., **ಭಾರತ ಸಾಹಿತ್ಯ ಸಂಸ್ಕೃತಿಗೆ ಪಾಶ್ಚಾತ್ಯ ವಿದ್ವಾಂಸರ ಸೇವೆ**, ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್, ಮೈಸೂರು, ೧೯೮೭

೨೬. ರಂಗನಾಥ್‌ರಾವ್ ಜಿ. ಎನ್., **ಪತ್ರಿಕೋದ್ಯಮ**, ಕಾಮಧೇನು ಪಬ್ಲಿಷರ್ಸ್, ಬೆಂಗಳೂರು, ೨೦೦೫

೨೭. ರವೀಂದ್ರನಾಥ ಕೆ. (ಸಂ.), **ಬಳ್ಳಾರಿ ಜಿಲ್ಲಾ ದರ್ಶನ**, ಪ್ರಸಾರಾಂಗ, ಗುಲಬರ್ಗಾವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೨೮. ರಾಮಚಂದ್ರನ್ ಸಿ. ಎನ್., **ವಸಾಹತೋತ್ತರ ಚಿಂತನೆ**, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦

೨೯. ಶೇಷಗಿರಿರಾವ್ ಎಲ್. ಎಸ್. **ಹೊಸಗನ್ನಡ ಸಾಹಿತ್ಯ ಚರಿತ್ರೆ**, ಅಂಕಿತ ಪುಸ್ತಕ, ಬೆಂಗಳೂರು, ೧೯೯೯

೩೦. ಶಿವರಾಮಪಡಿಕ್ಕಲ್, ನಾಡು ನುಡಿಯ ರೂಪಕ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೨೦೦೧

೩೧. ಷೇಕ್ ಅಲಿ ಬಿ., **ಕರ್ನಾಟಕ ಚರಿತ್ರೆ, ಸಂ. ೦೬**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೩೨. ಸಭಾಪತಿ ಎನ್., **ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ ಬಳ್ಳಾರಿ ಲಂಡನ್ ಮಿಷನ್ನಿನ ಪ್ರಥಮ ಕೊಡುಗೆ**, ೨೦೦೧

೩೩. ಸೀತಾರಾಮಶಾಸ್ತ್ರಿ ಎನ್. ಎಸ್., ಕನ್ನಡ ಪತ್ರಿಕೋದ್ಯಮ ಒಂದು ಪರಿಚಯ, ಕರ್ನಾಟಕ ಪತ್ರಿಕಾ ಅಕಾಡೆಮಿ, ಬೆಂಗಳೂರು, ೧೯೯೮

೩೪. ಶ್ರೀನಿವಾಸ ಹಾವನೂರ, **ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ, ಹನಿಗತೆ, ಕಂಪ್ಯೂಟರ್** ಇತ್ಯಾದಿ, ಅನನ್ಯ ಪ್ರಕಾಶನ, ಮೈಸೂರು, ೧೯೮೨

೩೫. ಶ್ರೀನಿವಾಸ ಹಾವನೂರ, **ಹೊಸಗನ್ನಡದ ಅರುಣೋದಯ**, ಪ್ರಗತಿ ಪ್ರಿಂಟ್ಸ್ ಕಮ್ಯುನಿಕೇಷನ್, ಬೆಂಗಳೂರು, ೨೦೦೦

೩೬. **ಕರ್ನಾಟಕ ರಾಜ್ಯ ಕೋಶ ೪, ಜನಸಮುದಾಯ ಸಂಪುಟ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೭. ಭಾಷಾಂತರ ಯೋಜನಾ ಸಮಿತಿ, **ಕರ್ನಾಟಕ ಪರಂಪರೆ, ಸಂಪುಟ ೨**, ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು, ೧೯೭೦

## ಇಂಗ್ಲಿಷ್ ಆಕರ ಗ್ರಂಥಗಳು

1. Ainslie T. Embree, **Encyclopedia of Asian History, Vol-1** Callier Macmillan Publishars, London, 1988
2. Buchanan Francis, **A Journey from Madras through the Countries of Mysore, Canara and Malabar, Vol-3,** 1988
3. Chopra P. N. (Ed.), **The Gazetteer of India, History and Culture, Vol-2**, Publication Divison, Ministry of I&B, New Delhi, 1990
4. Denis L. Cottineu De Kloguen, **An Historical sketch of GOA,** Asian Educa tional Services, New Delhi, 1988
5. Diwakar R. R. (Ed.), **Karnataka Through the Ages,** Bangalore, 1968
6. Firth C. B., **An Introduction of Indian Church History,** Madras, 1961
7. George V. C. Kurvilangad, **Christianity in India Through the Ages,** Kottayam, 1972
8. Konduri Sarojni Devi, **Religion in Vijayanagara Empire**, Steriling Publishers Pvt.Ltd., New Delhi, 1990

9. Laxmi Devi (Ed.), **Encyclopedia of Social Change**, Anmol Publication Pvt Ltd., New Delhi, 1996
10. Maclean C. D., **Madras Presidency, Vol-1,** Asian Educational Services, Madras, 1989
11. Maclean C. D., **Madras Presidency, Vol-II,** Asian Educational Services, Madras, 1989
12. Maclean C. D., **Madras Presidency, Vol-III,** Asian Educational Services, Madras, 1989
13. Majumdar R. C., **British Paramountcy and Indian Renaissance Part - I,** Bharathiya Vidya Bhavan, Bombay, 1965
14. Majumdar R. C, **British Paramountcy and Indian Renaissance Part - II,** Bharathiya Vidya Bhavan, Bombay, **1988**
15. Mark Wilks, **South Indian History, Vol-II,** Cosmo Publishers, New Delhi, 1980
16. Mircea Eliade, **The Encyclopedia of Religion Vol-3,** Collier Mack Millan Pub lishers, London, 1987
17. Mukherjee Ramakrishna, **The Rise and Fall of The East India Company,** London, 1959
18. Nage Gowda H. L., **Pravsi Kanda India**, Vol-2, Mysore, 1971
19. Nilakanta Sastri, **A History of south India**, Oxford University Press, Madras, 1975
20. Peter Wilson Prabhakar, **The Basel Mission In South Kanara, 1834 to 1947,** Ph.D. Thesis, Mangalore University, 1989
21. Severain Silva, **Anals of the Carvar Mission,** Mithic Society, Bangalore, 1963
22. Singh K. S. (Ed), **People of India, Karnataka - Part - II**, Affliated East West Press Pvt Litd., New Delhi, 2003
23. Stephen Hay, **Sources of Indian tradition, Vol-II,** Columbia University Press, Columbia, 1988
24. Suryanath U. Kamath, **Karnataka State Gazetteer, Part-I**, Govt of Karnataka, Bangalore, 1982
25. Sylevester Mc Goldrick, **BELLARY MISSION**, Franciscan Missionary Union, Londan, 1960
26. **Encyclopedia of Social work in India, Vol-2,** University of welfare, Govt of India, New Delhi, 1987
27. Gazetter of India, **Bellary District-Mysore State,** Govt of Mysore, Bangalore, 1972
28. **The Collected Works of MAHATMA GANDHI Vol-47,** The Publication Division, Ministry of I&B, Govt of India, 1994
29. **The Collected Works of MAHATMA GANDHI Vol-88,** The Publication Division, Ministry of I&B, Govt of India, 1995



೧೮೧೦ ರಲ್ಲಿ ಜಾನ್ ಹ್ಯಾಂಡ್ಸ್‌ರಿಂದ ಸ್ಥಾಪನೆಯಾದ ಚರ್ಚ್



೧೮೨೨ ರಲ್ಲಿ ಸ್ಥಾಪನೆಯಾದ ಲಂಡನ್ ಮಿಷನ್ ಮುದ್ರಣ ಕೇಂದ್ರ



೧೮೫೬ ರಲ್ಲಿ ಫಾ.ದೋಯಲ್‌ರಿಂದ ಸ್ಥಾಪನೆಯಾದ ಸಂತ ಅಂತೋನಿಯರ ಚರ್ಚ್



೧೮೮೫ ರಲ್ಲಿ ಸ್ಥಾಪನೆಯಾದ ಸಂತ ಫಿಲೋಮಿನಾ ಶಾಲೆ



೧೯೦೪ ರಲ್ಲಿ ಸ್ಥಾಪನೆಯಾದ ಸಂತ ಜಾನರ ಶಾಲೆ, ಕೋಟೆ



೧೯೦೬ ರ ಸ್ಥಾಪನೆಯ ಹಿನ್ನೆಲೆ ಹೊಂದಿರುವ ಸಂತ ಜೋಸಫರ ಶಾಲೆ

